ನವಸಾಕ್ಷರ ಪುಸ್ತಕ ಮಾಲೆ ೯೭

# ನನ್ನ ಹಳ್ಳಿಯ ಪಾರ್ವತಿ

ಹೇಮಂತ್ ಕೃಷ್ಣಾ

B.V. Mohan Kumar






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹಾ. ಮಾ. ನಾಯಕ
ಎಚ್. ನರಸಿಂಹಯ್ಯ
ಜಿ. ನಾರಾಯಣ
ಎಲ್. ಎಸ್. ಶೇಷಗಿರಿರಾವ್
ಶಾಂತರಸ
ಕೆ. ವಿ. ಸುಬ್ಬಣ್ಣ
ಗೊ. ರು. ಚನ್ನಬಸಪ್ಪ
ಪಿ. ಎಸ್. ಶಂಕರ್
ಶಿವಶಂಕರ ಹಿರೇಮಠ
ಆರ್. ಎಸ್. ರಾಜಾರಾಮ್
ಶ್ರೀಮತಿ ಎಲ್. ಜಿ. ಸುಮಿತ್ರ

**ಸಂಪಾದಕ ಸಮಿತಿ**

*ಶ್ರೀಯುತರಾದ*
ಎಸ್. ಜಿ. ನಾಗಲೋಟಿಮಠ
ಕೆ. ವಿ. ನಾರಾಯಣ
ಪುರುಷೋತ್ತಮ ಬಿಳಿಮಲೆ
ಕರೀಗೌಡ ಬೀಚನಹಳ್ಳಿ
ಅಮೃತ ಸೋಮೇಶ್ವರ
ಸಿ. ಆರ್. ಚಂದ್ರಶೇಖರ್
ಬಿ. ಎ. ಶ್ರೀಧರ
ಲಿಂಗದೇವರು ಹಳೆಮನೆ
ಭ. ಮಲ್ಲಿಕಾರ್ಜುನ
ಮಹಾಬಲೇಶ್ವರರಾವ್
ಭಕ್ತಪ್ರಿಯ
ಎಂ. ಪಿ. ಪರಮಶೇಖರಯ್ಯ
ಶ್ರೀಮತಿ ಉಷಾ ರಾಂಕುಮಾರ್

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ - ೬೭

# ನನ್ನ ಹಳ್ಳಿಯ ಪಾರ್ವತಿ

**ಹೇಮಂತ್ ಕೃಷ್ಣಾ**






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೧೧

NANNA HALLIYA PARVATHI : By Hemanth Krishna. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---



**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ. ೮.೦೦**

**ಮುದ್ರಕರು**
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
8/1, ಮಾರೇನಹಳ್ಳಿ, 1ನೇ ಕ್ರಾಸ್, 23ನೇ ಮೇನ್,
ಜೆ. ಪಿ. ನಗರ, ಬೆಂಗಳೂರು-560 078.
ಫೋನ್: 642102




# ನನ್ನ ಹಳ್ಳಿಯ ಪಾರ್ವತಿ

ರೈಲಿನಲ್ಲಿ ಕುಳಿತ ನನಗೆ ಸಂಜೆ ಅಕಸ್ಮಾತ್ತಾಗಿ ಭೇಟಿಯಾದ ನನ್ನ ಪಾರ್ವತಿ ಅತ್ತಿಗೆಯದೇ ಧ್ಯಾನ. ಎದುರಿಗೆ ಕುಳಿತ ಮುದುಕಿಯನ್ನು ಕೈಹಿಡಿದು ಕರೆತಂದು ಇಲ್ಲಿ ಕೂರಿಸಿದ್ದಳು. ಹಾಗೆ ನನ್ನನ್ನು ನೋಡಿ ಬೆರಗಾದಳು. ವಾಪಸಾಗುವಾಗ ಮನೆಗೆ ಬಂದೇ ಬರಬೇಕೆಂದು ಆಣೆ ಮಾಡಿಸಿಕೊಂಡಳು.

ನಾನು ಪಾರ್ವತಿ ಅತ್ತಿಗೆಯನ್ನು ಮೊದಲ ಬಾರಿಗೆ ನೋಡಿದ ಆ ದಿನ, ಸ್ಥಳ ಎಲ್ಲವೂ ಈಗಲೂ ನಿಚ್ಚಳವಾಗಿ ನೆನಪಿನಲ್ಲಿದೆ. ಆ ದಿನ ಭಾನುವಾರ. ನನ್ನ ಬರವಣಿಗೆಯ ಪುಸ್ತಕಗಳನ್ನು ತೆಗೆದುಕೊಂಡು ಮುಂಜಾನೆಯೇ ನಾನು ನಮ್ಮ ಜಮೀನಿನ ಕಡೆ ಹೋಗಿದ್ದೆ. ರಜಾ ದಿವಸಗಳಲ್ಲಿ ಯಾವಾಗ ಊರಿಗೆ ಬಂದರೂ ನಮ್ಮ ಗದ್ದೆಗಳ ಕಡೆ ಹೊರಟು, ಓದಿ, ಬರೆದು, ಹೆಚ್ಚಿನ ಸಮಯ ಅಲ್ಲೇ ಕಳೆಯುವ ವಾಡಿಕೆ ನನ್ನದು.

ಆ ದಿನ ಮಧ್ಯಾಹ್ನದ ಹೊತ್ತಿನಲ್ಲಿ, ಗದ್ದೆ ಬದಿಯ ಮೇಲೆ ಹಾಗೇ ಮಲಗಿದ್ದೆ. ಬಹುಶಃ ನನಗೆ ಸ್ವಲ್ಪ ನಿದ್ದೆಯ ಮಂಪರೂ ಇತ್ತು ಎನಿಸುತ್ತದೆ. ಅಂತಹಾ ಸಮಯದಲ್ಲಿ ನನ್ನ ಬಳಿ ಯಾರೋ ಬಂದು ನಿಂತಿದ್ದಂತೆ ಅನಿಸಿತು. ತಡಬಡಿಸುತ್ತಾ ಎದ್ದು ನೋಡಿದೆ.

ಚೆನ್ನಾಗಿ ಸಿಂಗರಿಸಿಕೊಂಡಿದ್ದ ಹದಿನಾರು-ಹದಿನೇಳು ವರುಷದ ಹೆಣ್ಣು, ನನ್ನ ಎದುರಿಗೆ ನಿಂತಿದ್ದಳು. ನಾನು ಆಶ್ಚರ್ಯದಿಂದ ಆಕೆಯ ಮುಖವನ್ನೇ ನೋಡತೊಡಗಿದೆ. ಆಕೆ ನಸುನಗುತ್ತಾ "ನಿಮ್ಮ ಹೆಸರು ಸನಾತನ್ ಅಲ್ಲವೇ?". ಎಂದಳು.

"ಹಾ... ಹೌದು" ಎಂದೆ.

"ಕಾನ್ಪುರದಲ್ಲಿ ಬಿ.ಎ. ಓದುತ್ತಿದ್ದೀರಲ್ಲವೆ?"

"ಹಾ.."

"ನೆನ್ನೆ ಶನಿವಾರ ಬಂದಿರಿ. ಈ ದಿನ ಭಾನುವಾರ ಇಲ್ಲಿ ಇರುತ್ತೀರ. ನಾಳೆ ಸೋಮವಾರ ಪುನಃ ಹೊರಟುಹೋಗುತ್ತೀರಾ. ಹೌದಲ್ಲವೇನು?"

"ಹಾ...."

"ಹತ್ತು ತಿಂಗಳ ಹಿಂದೆ ಬಂದಿದ್ದವರು, ಮತ್ತೆ ಈಗ ಬಂದಿದ್ದೀರಿ. ಅಲ್ಲವೇನು?"

"ಹಾ...."

"ಈ ಹಳ್ಳಿಯಲ್ಲೇ ನೀವು ಹೆಚ್ಚು ಓದಿದವರು. ಹೌದಲ್ಲವೇನು?"

"ಹಾ..." ಆಕೆಗೆ ನನ್ನ ವಿಚಾರವನ್ನು ತಿಳಿಸಿದವರು ಯಾರು, ಇಷ್ಟಕ್ಕೂ ಆಕೆ ಯಾರು.... ಎಂದೆಲ್ಲಾ ಕೇಳಬೇಕೆಂದುಕೊಂಡೆ. ಆದರೆ ನನಗೆ ಮಾತನಾಡುವ ಅವಕಾಶ ಕೊಟ್ಟರೆ ತಾನೇ? ಊಹೂಂ. "ನಿಮ್ಮ ಮದುವೆ ಹೋದ ವರುಷ ನಡೆಯಿತು. ಜನರು ನಿಮ್ಮನ್ನು ಚಿಕ್ಕ ಅಣ್ಣಾವು ಎಂದು ಕರೆಯುತ್ತಾರೆ. ನೀವು ವೈಶಾಖದಲ್ಲಿ ಎರಡು ನಾಟಕ ಮಾಡುತ್ತೀರಿ. ನೀವು ನಾಟಕ ಬರೆಯುತ್ತೀರಿ ಸಹ. ಹೋದ ವರುಷ... ತೋಟದ ಆ ದೊಡ್ಡ ಮಾವಿನ ಮರದ ಕೊಂಬೆಯ ಮೇಲೆ ಕುಳಿತು ನೀವು ಓದುತ್ತಿದ್ದಿರಿ.

ಓದುತ್ತಾ ಹಾಗೆ ಮಲಗಿಬಿಟ್ಟಿರಿ ಅನಿಸುತ್ತೆ. ಧಬ್ ಎಂದು ಕೆಳಗೆ ಬಿದ್ದುಬಿಟ್ಟಿರಿ." ಹೇಳುತ್ತಾ ಹೇಳುತ್ತಾ ನಗಲು ಆರಂಭಿಸಿ ಮತ್ತೆ"ನೀವು ತುಂಬಾ ನಿದ್ದೆ ಮಾಡ್ತೀರಿ. ಈ ದಿನವೂ ನಿದ್ದೆ ಮಾಡುತ್ತಿದ್ದಿರಿ... ಹಾಂ.... ಅಂದಹಾಗೆ... ನೆನ್ನೆ ನಿಮ್ಮ ಅತ್ತಿಗೆಯನ್ನು..."

ಈ ನಡುವೆ ಶಂಕರನ ಕೂಗು ಕೇಳಿಸಿತು. "ಅರೆ... ನೀನು ಇಲ್ಲಿ ಇವನ ತಲೆ ತಿನ್ನುತ್ತಿದ್ದೀಯೇನು? ನಡಿ.. ಇನ್ನೂ ಅರ್ಧ ಗದ್ದೆಯ ಕಳೆ ತೆಗೆಯಬೇಕು. ಅತ್ತಿಗೆ ಗೊಣಗಲು ಶುರುಮಾಡಿದ್ದಾಳೆ."

ಶಂಕರಣ್ಣನ ಈ ಮಾತುಗಳನ್ನು ಕೇಳಿದ ತಕ್ಷಣ ಗೊತ್ತಾಯಿತು. ಈ ಹೆಣ್ಣು ಶಂಕರಣ್ಣನ ಮಡದಿ ಪಾರ್ವತಿಯೆಂದು. ಈಕೆಯ ವಿಚಾರವನ್ನು ನನ್ನ ಹೆಂಡತಿ ಮತ್ತು ನನ್ನ ಅತ್ತಿಗೆ ಸುಮಾರು ಸಾರಿ ಮಾತನಾಡಿದ್ದರು. ನಾನು ಶಂಕರಣ್ಣನೊಡನೆ ಹೇಳಿದೆ.



**ಸನಾತನ್, ಶಂಕರ ಮತ್ತು ಪಾರ್ವತಿ**

"ಬಾ ಅಣ್ಣ, ಕುಳಿತುಕೋ ಬಾ. ನಾನು ಈಗ ಹೇಳುವುದನ್ನು ಕೇಳಿಸಿಕೊ. ತಪ್ಪಿದ್ದರೆ ನನ್ನನ್ನು ತಡೆಯುವೆಯಂತೆ." ನಾನು ಆ ಹೆಣ್ಣಿನೊಡನೆ ಹೇಳಿದೆ. "ನೀವೂ ಕುಳಿತುಕೊಳ್ಳಿ" ಅವರಿಬ್ಬರೂ ನನ್ನ ಎದುರಿಗೆ ಕುಳಿತುಕೊಂಡ ಮೇಲೆ, ಆಕೆಯ ಕಡೆ ತಿರುಗಿ ಹೇಳಿದೆ

"ನಿಮ್ಮ ಹೆಸರು ಪಾರ್ವತಿಯಲ್ಲವೇ?"

"ಹಾಂ..." ಆಕೆ ನಸುನಗುತ್ತಾ ಹೇಳಿದಳು.

"ನಿಮ್ಮ ಪತಿಯ ಹೆಸರು ಶಂಕರ ... ಹೌದಲ್ಲಾ?"

"ಹಾ...."

"ಹೋದ ವರ್ಷ ಆಶ್ವೀಜದಲ್ಲಿ ನಿಮ್ಮ ಮದುವೆ ಆಯಿತಲ್ಲವೇ?"

"ಹಾ..."

"ಐದನೆಯ ತರಗತಿಯವರೆಗೆ ಓದಿದ್ದೀರಿ ಅಲ್ಲವೇ?"

"ಹಾ..."

"ತುಂಬಾ ಚೆನ್ನಾಗಿ ಹಾಡುತ್ತೀರಿ, ತುಂಬಾ ಚೆನ್ನಾಗಿ ಕುಣಿಯುತ್ತೀರಿ. ಜೊತೆಗೆ ಇನ್ನೂ ಒಂದು ವಿಚಾರ ಕೇಳಿದ್ದೇನೆ."

"ಏನದು?"

"ನೀವು ನಮ್ಮ ಶಂಕರಣ್ಣನನ್ನೂ ಕುಣಿಸುತ್ತೀರಿ ಎಂದು."

ಇಬ್ಬರೂ ಕಿಲಕಿಲನೆ ನಕ್ಕರು. ನಂತರ ಶಂಕರಣ್ಣ ಸ್ವಲ್ಪ ಗಂಭೀರವಾಗಿ ಹೇಳಿದ.

"ತಮ್ಮ, ಒಂದು ಮಾತು ಕೇಳಲೇ?"

"ಹಾ... ಕೇಳಣ್ಣ....."

"ಗಂಡಸು ಓದುವುದರಿಂದ ಪ್ರಯೋಜನವಿದೆ. ಆದರೆ ಹೆಂಗಸು ಓದು ಕಲಿಯುವುದರಿಂದ ಪ್ರಯೋಜನ ಇದೆಯೇ?"

"ಖಂಡಿತಾ ಇದೆ. ಯಾಕೆ? ನಿನಗೆ ಓದುಬರಹ ಕಲಿತಿರುವ ನನ್ನ ಪಾರ್ವತಿ ಅತ್ತಿಗೆ ಇಷ್ಟವಾಗಲಿಲ್ಲವೇನು?"

"ನನಗೆ ಇಷ್ಟವಾದಳು. ನಿಜಕ್ಕೂ ಇಷ್ಟವಾದಳು. ಅಕ್ಕ-ಪಕ್ಕದವರಿಗೆ, ಹಳ್ಳಿಯ ಎಲ್ಲರಿಗೂ ಇಷ್ಟವಾದಳು. ಆದರೆ ಅಣ್ಣ-ಅತ್ತಿಗೆ ಮತ್ತು ನಮ್ಮಅಮ್ಮ, ಈ ಮೂವರಿಗೆ ಮಾತ್ರ ಇವಳ ನೆರಳು ಕಂಡರೆ ಕೂಡಾ ಸಹಿಸಲು ಆಗುವುದಿಲ್ಲ."

"ಯಾಕೆ... ಏನು ವಿಷಯ?"

"ಇವಳ ನಡೆ-ನುಡಿ, ಮಾತುಕತೆ, ಕೂರುವುದು, ನಿಲ್ಲುವುದು, ಎಲ್ಲವನ್ನೂ ಸ್ವಚ್ಛ ಮಾಡುವುದು, ತಾನೂ ಸ್ವಚ್ಛವಾಗಿರುವುದು, ಸದಾ ತಲೆ ಬಾಚಿ, ಕುಂಕುಮ ಇಟ್ಟು... ಈಗಲೂ ನೋಡು. ಗದ್ದೆಯಲ್ಲಿ ಕಳೆ ತೆಗೆಯಲು ಬಂದಿರುವಾಗಲೂ ತಿದ್ದಿ ತೀಡಿಕೊಂಡು ಸಿಂಗರಿಸಿಕೊಂಡು..."

"ಅದರಲ್ಲಿ ತಪ್ಪೇನಿದೆ." ನಾನು ಮಧ್ಯೆ ಬಾಯಿಹಾಕಿದೆ. "ಎಲ್ಲರ ಜೊತೆಯಲ್ಲಿಯೂ ಬೆರೆತು ನಗುತ್ತಾ ಮಾತನಾಡುವುದು, ಸದಾ ಸ್ವಚ್ಛವಾಗಿರುವುದು, ಒಳ್ಳೆಯ ಬಟ್ಟೆ ಉಡುವುದು, ಇದೆಲ್ಲಾ ಒಳ್ಳೆಯ ಅಭ್ಯಾಸಗಳು."

"ಹೌದು. ನಾನೂ ಅದನ್ನೇ ಹೇಳುತ್ತೇನೆ." ಪಾರ್ವತಿ ಅತ್ತಿಗೆ ಮಧ್ಯದಲ್ಲೇ ಮಾತನಾಡಲು ಮೊದಲು ಮಾಡಿದಳು. - "ನಮ್ಮ ಕಮಲಕ್ಕ ಹೇಳುತ್ತಾ ಇದ್ದಳು.. ಅರೆ ಸುಮ್ಮನಿರು ಪಾರ್ವತಿ" ಶಂಕರ ಮಧ್ಯದಲ್ಲೇ ಅವಳನ್ನು ಸುಮ್ಮನಾಗಿಸಿದ.

ನನ್ನನ್ನು ಕುರಿತು "ಈ ಕಮಲಕ್ಕನೇ ಎಲ್ಲಾ ಜಗಳದ ಮೂಲ. ಈ ಪಾರ್ವತಿ ನಾವು ದನಕರುಗಳಿಗೆಂದು ತಂದ ಸೊಪ್ಪುಸದೆಯಲ್ಲಿ, ಕೆಲವು ಸೊಪ್ಪುಗಳನ್ನು ಆರಿಸಿಕೊಂಡು ಪಲ್ಯ ಮಾಡುತ್ತಾಳೆ. ಅತ್ತಿಗೆಯೋ ದನಕರುಗಳಿಗೆ ತಿನ್ನಿಸುವ ಸೊಪ್ಪನ್ನು ನಮಗೆ ತಿನ್ನಿಸುತ್ತಾಳೆಂದು ರಾದ್ಧಾಂತ ಮಾಡುತ್ತಾಳೆ. ಇವಳು 'ನಮ್ಮ ಕಮಲಕ್ಕ, ಚಕ್ರೋತನೆ ಸೊಪ್ಪು ಬಹಳ ಶಕ್ತಿದಾಯಕವಾದದ್ದು ಎಂದು ಹೇಳುತ್ತಿದ್ದಳು' ಎಂದು ಸಮಜಾಯಿಷಿ ನೀಡುತ್ತಾಳೆ. ಅತ್ತಿಗೆ ಯಾವಾಗಲೂ ಕೇವಲ ತೊಗರಿಬೇಳೆ ಮಾತ್ರ ಬಳಸುತ್ತಿದ್ದಳು. ಈ ನನ್ನ ಹೆಂಡತಿ ಬಂದಾಗಿನಿಂದ ವಿವಿಧ ಬೇಳೆಗಳನ್ನು ಸೇರಿಸಿ ಅಡಿಗೆ ಮಾಡುತ್ತಾಳೆ. ಏನಾದರೂ ಕೇಳಿದರೆ ನಮ್ಮ ಕಮಲಕ್ಕ ಹೀಗೆಯೇ ಮಾಡುತ್ತಿದ್ದದ್ದು ಎನ್ನುತ್ತಾಳೆ. ಒಂದು ದಿನ ನಮ್ಮಮ್ಮ ಅನ್ನದಿಂದ ಗಂಜಿಯನ್ನು ಬಸಿಯುತ್ತಿದ್ದಳು. ಇವಳು ತಟಕ್ಕನೆ ಅವಳ ಕೈ ಹಿಡಿದು "ಅಮ್ಮ, ನೀವು ಅನ್ನದ ಸಾರವನ್ನೆಲ್ಲ ಬಚ್ಚಲಿಗೆ ಸುರಿಯುತ್ತಿದ್ದೀರಿ" ಎಂದಳು. ಅಷ್ಟು ಸಾಕಾಯ್ತು. ಅಮ್ಮ ಕನಲಿ ಕೆಂಡವಾಗುವುದಕ್ಕೆ. ಅಡಿಗೆ ಕೋಣೆ ಬಿಟ್ಟು ತಲೆಬಾಗಿಲಲ್ಲಿ ಕುಳಿತುಬಿಟ್ಟಳು. ಆದಿನದಿಂದ, ಅಮ್ಮ ಇವಳು ಮಾಡಿದ ಅಡಿಗೆ ಉಣ್ಣುವುದಿಲ್ಲ. ಅಣ್ಣ ತಟ್ಟೆಯನ್ನು ನೂಕಿ ಎದ್ದು ಹೋಗುತ್ತಾನೆ. ನಾನೊಬ್ಬ ಇವಳ ಕಮಲಕ್ಕನ ಬುದ್ಧಿವಾದದ ಫಲ ಅನುಭವಿಸುತ್ತಿದ್ದೇನೆ."

ನಾನು ನೋಡುತ್ತಿದ್ದೆ. ಶಂಕರ ಹೇಳುತ್ತಲೇ ಹೋದಂತೆ ಪಾರ್ವತಿ ಅತ್ತಿಗೆ ನಸುನಗೆ ಸೂಸುತ್ತಲೇ ಇದ್ದಳು. ಅವನು ಎಲ್ಲಾ ಹೇಳಿ ಮುಗಿಸಿದ ಎನ್ನುವ ಹೊತ್ತಿಗೆ ತಾನು ಮೆಲ್ಲಗೆ ಉಸುರಿದಳು. "ನಮ್ಮ ಕಮಲಕ್ಕ ಒಳ್ಳೆಯ ಮಾತನ್ನು ಹಾಗೂ ಸತ್ಯವನ್ನು ಯಾರಿಗಾದರೂ ಆಗಲಿ ಹೇಳಲೇಬೇಕು. ಎಂದು ಹೇಳುತ್ತಿದ್ದಳು.

"ನೀನು, ಆ ನಿನ್ನ ಕಮಲಕ್ಕ ಇಬ್ಬರೇ ಸತ್ಯವಂತರು." ಶಂಕರಣ್ಣ ಸ್ವಲ್ಪ ಕಟುವಾಗಿ ಹೇಳಿದ್ದಕ್ಕೆ ಪಾರ್ವತಿ ನನಗೆ ಹೇಳಿದಳು, "ನೀವೇ ಹೇಳಿ ಮೈದಂದಿರೆ, ನನ್ನ ಮಾತು ಸುಳ್ಳೆ? ನೀವು ಡಾಕ್ಟರಾಗುವುದಕ್ಕೆ ಓದುತ್ತಿದ್ದೀರಂತೆ."

"ಹೌದತ್ತಿಗೆ.... ಡಾಕ್ಟರಾಗಲು ಓದುತ್ತಿದ್ದೇನೆ ಮತ್ತು ನೀನು ಹೇಳಿದ ವಿಚಾರಗಳೆಲ್ಲವೂ ನಿಜವೆಂದು ನನಗೆ ಗೊತ್ತು. ನಿನ್ನ ಕಮಲಕ್ಕ ಹೇಳಿದ ಅಡಿಗೆ ತಿಂದೂ ತಿಂದೂ ತಾನೂ ಕಮಲಕ್ಕನ ಹಾಗೆ ಆಗುತ್ತಿದ್ದಾನೆ ನೋಡಿದೆಯಾ ನಿನ್ನ ಗಂಡ!"

"ಹಾಗಾದರೆ ನಾನು ಹೇಳಿದ್ದು ಸರಿಯಲ್ಲವೇನು?"

"ಹೌದು... ಖಂಡಿತವಾಗಿ ಎಲ್ಲಾ ವಿಚಾರಗಳು ಸರಿಯಾಗಿವೆ."

"ಅಯ್ಯೋ, ಇವಳ ಮಾತಿಗೆ ಮರುಳಾಗಬೇಡ" ಶಂಕರ ನಗುತ್ತಾ ಹೇಳಿದ. "ಇವಳು ಎಲ್ಲರ ಮೇಲೂ ಮೋಡಿ ಮಾಡುತ್ತಾಳೆ. ನಮ್ಮ ಅಣ್ಣ-ಅತ್ತಿಗೆ ಮಾತ್ರ ಇವಳ ಮೋಡಿಗೆ ಸಿಕ್ಕಿಲ್ಲ. ಇಲ್ಲದಿದ್ದರೆ ಇವಳಿಗೆ ಎಷ್ಟು ಜಾಣತನ ಇದೆಯೆಂದರೆ ಬೆಳಗನ್ನು ರಾತ್ರಿಯೆಂದು ವಾದಿಸಿ ನಿನ್ನನ್ನು ಒಪ್ಪಿಸುತ್ತಾಳೆ ಕೂಡಾ..."

"ಹೌದೇನತ್ತಿಗೆ?" ನಾನು ಕೇಳಿದ್ದಕ್ಕೆ ನಗುತ್ತಾ, "ಈ ಹಳ್ಳಿಯಲ್ಲಿ ಹಾಗೇ ಆಗುತ್ತದೆ. ನೋಡು, ಬೆಳಗನ್ನು ಇದು ಬೆಳಿಗ್ಗೆ ಅನ್ನು ಯಾರಿಗೂ ಅರ್ಥವೇ ಆಗುವುದಿಲ್ಲ. ಬೆಳಿಗ್ಗೆಯನ್ನು ರಾತ್ರಿ ಎನ್ನುತ್ತಾ ನಾಲ್ಕೈದು ಜನರನ್ನು ಕಲೆಹಾಕಿಕೊಂಡು ಜೋರಾಗಿ ಅಬ್ಬರಿಸು. ಆಗ ಜನರಿಗೆ ದಿನದಲ್ಲೇ ನಕ್ಷತ್ರಗಳು ಕಾಣಿಸತೊಡಗುತ್ತವೆ. ನಮ್ಮ ಕಮಲಕ್ಕ...."

"ಈ ಕಮಲಕ್ಕ ಯಾರು ಅತ್ತಿಗೆ...?" ನಾನು ನಗುತ್ತಾ ಕೇಳಿದೆ. ಅತ್ತಿಗೆ ನಾಚುತ್ತಾ "ಏನು ಮಾಡಲಿ ತಮ್ಮ, ಪದೇ ಪದೇ ಅವಳ ಹೆಸರು ಹೇಳಬಾರದು ಎಂದುಕೊಳ್ಳುತ್ತೇನೆ. ಆದರೂ ನನ್ನ ನಾಲಿಗೆಯ ಮೇಲೆ ಸದಾ ಅವಳ ಹೆಸರು ನಲಿಯುತ್ತಿರುತ್ತದೆ."

"ಇಷ್ಟಕ್ಕೂ ಯಾರು ಆಕೆ?"

"ಅರೆ, ಅವಳು ಏನು ಹೇಳುತ್ತಾಳೆ. ನಾನು ಹೇಳ್ತೀನಿ" ಎನ್ನುತ್ತಾ ಶಂಕರನ ಅತ್ತಿಗೆ ನನ್ನೆದುರಿಗೆ ಕಣ್ಣು ಕೆಂಪಗೆ ಮಾಡಿಕೊಂಡು ನಿಂತಳು. ಪಾರ್ವತಿಯ ಕಡೆ

ನೋಡುತ್ತಾ,"ನೋಡು ಹೇಗೆ ನಿಂತಿದ್ದಾಳೆ. ದೊಡ್ಡವಳ ಹಾಗೆ. ಅರಳು ಹುರಿದಂತೆ ಮಾತನಾಡಲು ನಾಚಿಕೆ ಆಗುವುದಿಲ್ಲ ನಿನಗೆ? ನಡಿ. ಹುಲ್ಲನ್ನೆಲ್ಲಾ ಹೊರೆಮಾಡಿ ಹೊತ್ತುಕೊಂಡು ಮನೆ ದಾರಿಹಿಡಿ. ಅಲ್ಲಿ ಎತ್ತುಗಳು ಬಾಯಾರಿರುತ್ತವೆ. ನೀರು ಕುಡಿಸಿ ಅಡಿಗೆಮನೆ ಕಡೆ ನಡಿ. ಅಷ್ಟರಲ್ಲಿ ನಾನು ಒಡ್ಡು ಕಟ್ಟಿ, ಕಳೆ ತೆಗೆದು ಬರ್‍ತೀನಿ..."

ಪಾರ್ವತಿಯ ಮೇಲೆ ಈ ರೇಗಾಟ ಏನೂ ಪರಿಣಾಮ ಬೀರಿದಂತೆ ತೋರಲಿಲ್ಲ. ಅವಳು ನಗುತ್ತಲೇ ಇದ್ದಳು ಮತ್ತು ಸಾವಧಾನವಾಗಿ "ನಾನು ಹುಲ್ಲಿನ ಹೊರೆ ಹೊತ್ತು ಮನೆಗೆ ಹೋಗುತ್ತೇನೆ. ಎತ್ತುಗಳಿಗೆ ನೀರನ್ನೂ ಕುಡಿಸುತ್ತೇನೆ. ಅಡಿಗೆಯನ್ನೂ ಮಾಡ್ತೀನಿ. ಆದರೆ ಅಕ್ಕ, ನೀನೊಂದು ಕೆಲಸ ಮಾಡ್ತೀಯಾ?"

"ಏನು ಮಾಡಬೇಕು?" ಮುಖ ಊದಿಸಿಕೊಂಡು ಕೇಳಿದ ಆಕೆಗೆ ಅತ್ತಿಗೆ.

"ಸ್ವಲ್ಪವೇ ಸ್ವಲ್ಪ ನಕ್ಕುಬಿಡಮ್ಮ" ಎನ್ನುತ್ತಾ ನಕ್ಕಳು. ಶಂಕರನಿಗೂ ನಗು ಬಂತು. ನನಗೂ ನಗೆ ಬಾರದಿರಲಿಲ್ಲ. ಆದರೆ ಶಂಕರನ ಅತ್ತಿಗೆಯ ಸಹನೆ ಮಾತ್ರ ಹಾರಿಹೋಯಿತು. "ಈ ಪಾತರಗಿತ್ತಿತನ ನನಗೆ ಸ್ವಲ್ಪವೂ ಇಷ್ಟವಾಗುವುದಿಲ್ಲ. ನಿನಗೆ ಸಾವಿರ ಸಲ ಹೇಳಿದ್ದೀನಿ. ಏನೆಂದರೆ..."

"ಅಯ್ಯೋ ಅತ್ತಿಗೆ, ಬಿಡಬಾರದೆ ಅಲ್ಲಿಗೆ..." ಶಂಕರನ ಅತ್ತಿಗೆಯನ್ನು ನಾನು ಸುಮ್ಮನಾಗಿಸಿದೆ. ಆಕೆ ಸುಮ್ಮನಾದರೂ ಈ ಪಾರ್ವತಿ ಸುಮ್ಮನಿರಬೇಕಲ್ಲಾ! ಹೋಗುತ್ತಾ ಹೋಗುತ್ತಾ ನನ್ನ ಹತ್ತಿರ "ಮೈದುನರೇ, ನಾನು ಹೊರಟೆನಪ್ಪಾ, ನೀವು ನನ್ನಕ್ಕನನ್ನು ಮಡಿಲಲ್ಲಿ ಕೂಡಿಸಿಕೊಂಡು ನಗಿಸಿರಿ" ಎನ್ನುತ್ತಾ ನನ್ನ ಕಿವಿಯಲ್ಲಿ ಮಿಕ್ಕ ಮಾತನ್ನು ಪಿಸುಗುಟ್ಟಿದಳು. "ಸ್ವಲ್ಪ ಹುಷಾರಾಗಿ ಕೂಡಿಸಿಕೊಳ್ಳಿ. ಈ ನಡುವೆ ಅಕ್ಕನ ತೂಕ ಜಾಸ್ತಿಯಾಗಿದೆ. ಕಾಲು ಮುರಿದುಹೋದೀತು." ಹೀಗೆ ಹೇಳುತ್ತಾ ಪಾರ್ವತಿ ಹೊರಟುಹೋದಳು. ಅವಳ ಹಿಂದೆ ಶಂಕರ, ಅವನ ಹಿಂದೆ ಅವನ ಅತ್ತಿಗೆ ಎಲ್ಲರೂ ಹೋದರು. ಪಾರ್ವತಿ ಬಂದುಹೋದದ್ದು, ಕಾಡಿನ ಹಕ್ಕಿಯೊಂದು ಎಲ್ಲಿಂದಲೋ ಬಂದು,

ಸ್ವಲ್ಪ ಹೊತ್ತು ತೋಟದ ಗಿಡವೊಂದರ ಕೊಂಬೆಯ ಮೇಲೆ ಕುಳಿತು, ಚಿಲಿಪಿಲಿಗುಟ್ಟುತ್ತಾ ಇದ್ದು ನಂತರ ಎಲ್ಲಿಗೋ ಹಾರಿಹೋದಂತೆ ಅನ್ನಿಸಿತು.

ಆದಾದ ಐದಾರು ದಿನಗಳ ನಂತರದ ಮಾತಿದು. ನಾನು ಮನೆಯ ಹಜಾರದಲ್ಲಿ ಕುಳಿತು ಏನೋ ಬರೆಯುತ್ತಿದ್ದೆ. ಶಂಕರ್ ಓಡುತ್ತಾ ಬಂದು "ತಮ್ಮ, ಅನಾಹುತ ಆಗಿಹೋಯಿತು..." ಎಂದ ಆತುರದಿಂದ.

ನಾನು ಎದ್ದು ನಿಂತೆ. ಶಂಕರ ನಡುಗುತ್ತಾ ಹೇಳಿದ. "ಪಾರ್ವತಿ ಎಚ್ಚರ ತಪ್ಪಿ ಬಿದ್ದಿದ್ದಾಳೆ. ಬೇಗಬಾ ತಮ್ಮ, ನನ್ನಜೊತೆ ಬಾ."

ನಾನು ಶಂಕರನ ಜೊತೆ ಓಡುತ್ತಾ ಅವನ ಮನೆಗೆ ಹೋದೆ. ನೋಡುತ್ತೇನೆ. ಅಂಗಳದಲ್ಲಿ ಪಾರ್ವತಿ ಎಚ್ಚರತಪ್ಪಿ ಬಿದ್ದಿದ್ದಳು. ಅವಳ ತಲೆಯಿಂದ ರಕ್ತ ಸೋರುತ್ತಿತ್ತು.



**ಸನಾತನ್ ಮತ್ತು ಶಂಕರ ಗಾಯಗೊಂಡ ಪಾರ್ವತಿಯ ತಲೆಗೆ ಪಟ್ಟಿಕಟ್ಟಿದರು**

“ಇದೇನಾಯಿತು...” ನಾನು ಶಂಕರನ ಅತ್ತಿಗೆಯನ್ನು ಕೇಳಿದೆ. ಗರಬಡಿದವಳಂತೆ ನಿಂತಿದ್ದ ಅವಳು “ತಮ್ಮ... ಏನಾಯ್ತು ಎಂದರೆ... ಏನಾಯ್ತು ಎಂದರೆ...” ಎಂದು ಏನೋ ಹೇಳಲು ಹೊರಟಳು. ಶಂಕರ “ಮುಚ್ಚು ಬಾಯಿ, ಇನ್ನೊಂದು ಪದ ನಿನ್ನ ಬಾಯಿಂದ ಹೊರಗೆ ಬಂದರೆ, ನೋಡು ಏನಾಗುವುದೋ. ನನ್ನ ಕಣ್ಣೆದುರಿನಿಂದ ದೂರ ಹೋಗು” ಎಂದು ಕೋಪದಿಂದ ಅಬ್ಬರಿಸಿದ.

ನಾನು ಶಂಕರನನ್ನು ಸಮಾಧಾನ ಮಾಡುತ್ತಾ ಹೇಳಿದೆ. “ಮೊದಲು ಪಾರ್ವತಿಯನ್ನು ನೋಡಿಕೋ, ಅವಳ ತಲೆಯಿಂದ ರಕ್ತ ಸೋರುತ್ತಿದೆ.” ಶಂಕರಣ್ಣ ಪಾರ್ವತಿಯ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡನು. ನಾನು ಓಡಿಹೋಗಿ ಮನೆಯಿಂದ ಕೆಲವು ಔಷಧಿಗಳನ್ನು ತಂದೆ. ತಲೆಗೆ ಪಟ್ಟಿಕಟ್ಟಿ ಹೇಗೋ ಅಂತೂ ರಕ್ತ ಸೋರುವುದನ್ನು ನಿಲ್ಲಿಸಿದೆನು. ನಾನು ಪಾರ್ವತಿಯ ಮುಖದ ಮೇಲೆ ನಾಲ್ಕೈದು ಹನಿ ನೀರನ್ನೂ ಸಿಂಪಡಿಸಿದೆ. ಶಂಕರ ಕೈಚೌಕದಿಂದ ಅವಳ ಹಣೆಯ ಮೇಲಿನ ರಕ್ತವನ್ನು ಒರೆಸುತ್ತಿದ್ದನು. ಆಗ ಪಾರ್ವತಿಯ ಕಣ್ಣು ತೆರೆಯಿತು. ನಸುನಗುತ್ತಾ “ಅರೆ, ಪುಟ್ಟ, ನೀನಾ ಬಂದಿರುವುದು. ಇಷ್ಟಕ್ಕೂ ರಕ್ತ ಹೇಗೆ ಬಂತು..” ಎಂದು ಹೇಳುತ್ತಾ ಏಳಲು ನೋಡಿದಳು. ನಾನೇ ಅವಳನ್ನು ಮತ್ತೆ ಶಂಕರನ ಮಡಿಲಲ್ಲಿ ಮಲಗಿಸಿದೆ.

“ಓ.... ಇದಾ ವಿಷಯ...” ಮತ್ತೆ ನಸುನಕ್ಕಳು. “ನನ್ನ ಉಪಚಾರ ಮಾಡುತ್ತಿದ್ದೀರಾ. ಮಾಡಿಮಾಡಿ... ತುಂಬಾ ಅಪರೂಪವಾಗಿ ಇಂತಹಾ ಅವಕಾಶ ಸಿಕ್ಕಿದೆ” ಎನ್ನುತ್ತಾ ಕಣ್ಮುಚ್ಚಿಕೊಂಡಳು. ನನಗೆ ಗೊತ್ತಾಯಿತು ಅವಳಿಗೆ ತುಂಬಾ ನೋವಾಗುತ್ತಿದೆ ಎಂದು. ಆದರೆ ನೋವನ್ನು ಮರೆಯಲು ಅವಳು ನಗುತ್ತಿದ್ದುದು, ಹಾಸ್ಯ ಮಾಡುತ್ತಿದ್ದುದು ನೋಡಿದರೆ ಬಹಳ ಆಶ್ಚರ್ಯವಾಗುತ್ತಿತ್ತು. ಹೀಗೆ ಎಷ್ಟು ಜನ ತಮ್ಮ ನೋವಿಗೆ ಈ ರೀತಿಯ ಔಷಧಿಯನ್ನು ಕಂಡುಕೊಂಡಿರುತ್ತಾರೆ!!

ಪಾರ್ವತಿಗೆ ಎಚ್ಚರ ತಪ್ಪಿದ ವಿಷಯ ತಿಳಿದು ನನ್ನ ತಾಯಿ ಮತ್ತು ಅತ್ತಿಗೆ ಕೂಡಾ ಬಂದರು. ನಾನು ನನ್ನ ಅಮ್ಮನನ್ನು ಪಾರ್ವತಿಯ ಬಳಿ ಕೂರಿಸಿ, ಶಂಕರನನ್ನು

ಕರೆದುಕೊಂಡು ಮನೆಯ ಹೊರಗೆ ಬಂದೆ. ಹತ್ತಿರವೇ ಇದ್ದ ಊರಿನಿಂದ ಡಾಕ್ಟರನ್ನು ಕರೆತರಲು ಸೈಕಲ್ ಮೇಲೆ ಕೆಲಸದಾಳನ್ನು ಕಳಿಸಿದೆ. ಶಂಕರನ ಜೊತೆ ಮನೆಯ ಮುಂದಿನ ಹಜಾರದಲ್ಲಿ ಕುಳಿತೆ.

"ಇದೆಲ್ಲಾ ಹೇಗಾಯಿತು ಶಂಕರಣ್ಣಾ?"

"ಏನೆಂದು ಹೇಳಲಿ ತಮ್ಮಾ, ಮಿತಿಮೀರಿಹೋಯಿತು ಈ ದಿನ ಅತ್ತಿಗೆಯ ವರ್ತನೆ! ಇದಕ್ಕೆ ಮುಂಚೆಯೂ ಅತ್ತಿಗೆ ಪಾರ್ವತಿಯನ್ನು ಮೂರು ನಾಲ್ಕು ಬಾರಿ ಹೊಡೆದಿದ್ದಾಳೆ. ಆದರೆ ಪಾರ್ವತಿ ನನಗೆ ಎಂದೂ ಹೇಳಿರಲಿಲ್ಲ. ಆ ನನ್ನ ಅಣ್ಣನ ಪುಟ್ಟ ಮಕ್ಕಳು ಇವೆಲ್ಲವನ್ನೂ ನನ್ನ ಹತ್ತಿರ ಹೇಳುತ್ತಿದ್ದವು. ನಾನು ಯಾವಾಗ ಪಾರ್ವತಿಯನ್ನು ಕೇಳಿದರೂ, ಆ ಮಾತನ್ನು ಪಕ್ಕಕ್ಕೆ ತಳ್ಳಿಬಿಡುತ್ತಿದ್ದಳು."

"ಆದರೆ ಈದಿನ ಏನಾಯಿತು..?"

"ಅದನ್ನೇ ಹೇಳುತ್ತಿದ್ದೇನೆ. ಈ ಒಂದು ಗಂಟೆ ಮುಂಚೆ ನಾನು ಜಮೀನಿನಿಂದ ಬಂದೆ. ಮನೆಯೊಳಕ್ಕೆ ಕಾಲಿಡುತ್ತಿದ್ದಂತೆ ಪಾರ್ವತಿಯ ಹಾಡು ಕೇಳಿಸಿತು. ಅದು ಅವಳ ಅಭ್ಯಾಸ. ಕೆಲಸ ಮಾಡುತ್ತಾ ಮಾಡುತ್ತಾ ಹಾಡುವುದು. ಆಗಲೂ ಅವಳು ಚಂಪಾಳ ಜಡೆ ಹೆಣೆಯುತ್ತಿದ್ದಳು. ಹಾಡುತ್ತಲೂ ಇದ್ದಳು. ನಾನು ಬಾಗಿಲಲ್ಲಿ ನಿಂತುಕೊಂಡು ಹಾಡನ್ನು ಕೇಳುತ್ತಿದ್ದೆ.

"ಚಿಕ್ಕಮ್ಮಾ, ಹೂವಿನ ಜಡೆ ಹಾಕು ಎಂದಳು ಚಂಪಾ, ನನ್ನ ಅಣ್ಣನ ಮಗಳು. ಅವಳು ಯಾವಾಗಲೂ ಚಿಕ್ಕಮ್ಮನ ಕೈಯಲ್ಲೇ ಜಡೆ ಹೆಣಿಸಿಕೊಳ್ಳುತ್ತಿದ್ದಳು. ಎಲ್ಲಾ ಮಕ್ಕಳಿಗೂ ಎಣ್ಣೆನೀರು ಹಾಕುವುದು, ಅಲಂಕಾರ ಮಾಡುವುದು, ಅವರ ಬಟ್ಟೆ ಒಗೆಯುವುದು, ಅವರಿಗೆ ಕಥೆಗಳನ್ನು ಹೇಳುವುದು, ಓದು-ಬರಹ ಹೇಳಿಕೊಡುವುದು, ಈ ಎಲ್ಲಾ ಕೆಲಸಗಳೂ ಪಾರ್ವತಿಯದೇ. ಈ ಎಲ್ಲಾ ಕೆಲಸಗಳನ್ನು ಮಾಡುವಾಗಲೂ ಹಾಡು ತಪ್ಪದೆ ಇರಬೇಕಾದದ್ದೇ! ಯಾವಾಗಿನ ಹಾಗೆ ಈ ದಿನವೂ ಹಾಡುತ್ತಾ ಇದ್ದಳು."

"ಹಾಡುವುದು ಕೆಟ್ಟ ಕೆಲಸವೇನಲ್ಲ, ಅಲ್ಲವೇ?"

"ಏನಂತ ಹೇಳಲಿ ತಮ್ಮ, ನಮ್ಮತ್ತಿಗೆಗೆ ಏನಾಯಿತೋ ಕಾಣೆ. ಬಂದು ಚಂಪಳನ್ನು ಕೈಹಿಡಿದೆಳೆಯುತ್ತಾ 'ನೀನು ಇವಳ ಹಾಗೆ ಬಜಾರಿಯಾಗುತ್ತಿಯೇನು?' ಎಂದಳು."

"ಏನು ಮಾತಾಡುತ್ತಿದ್ದೀಯ ಅಕ್ಕ." ಪಾರ್ವತಿ ಹೇಳಿದ ತಕ್ಷಣ ಬೆಂಕಿ ಕಾರತೊಡಗಿದಳು ಅತ್ತಿಗೆ. 'ನೀನು ನನ್ನ ಮಕ್ಕಳನ್ನು ಹಾಳುಮಾಡುತ್ತಿದ್ದಿ. ಅವರು ಯಾವಾಗಲೂ ನಿನ್ನನ್ನು ಅಂಟಿಕೊಂಡಿರುತ್ತಾರೆ. ಈಗಲೂ ನೋಡು' ಎನ್ನುತ್ತಾ ಅವಳು ಚಂಪಾಳನ್ನು ಹಿಡಿದು ಎಳೆಯತೊಡಗಿದಳು. ಆದರೆ ಚಂಪಾ, ಪಾರ್ವತಿಯನ್ನು ಬಿಡಲಿಲ್ಲ. ಆಗ ಅತ್ತಿಗೆ ಚಂಪಾಳನ್ನು ಹೊಡೆಯತೊಡಗಿದಳು. ಪಾರ್ವತಿ ಚಂಪಾಳನ್ನು ಎದೆಗೆ ಅಪ್ಪಿಕೊಂಡು "ಅವಳನ್ನು ಯಾಕೆ ಹೊಡೆಯುತ್ತಿಅಕ್ಕಾ. ತಪ್ಪು ನನ್ನದು.." ಎಂದಳು.

"ಹಾಗಾದರೆ ನೀನೇ ಅನುಭವಿಸು" ಎಂದ ಅತ್ತಿಗೆ ಕಟ್ಟೆಯ ಮೇಲಿದ್ದ ತಪ್ಪಲೆಯಿಂದ ಪಾರ್ವತಿಯ ತಲೆಗೆ ಹೊಡೆದಳು. ದೊಡ್ಡದಾಗಿದ್ದ ತಪ್ಪಲೆ, ನಡುನೆತ್ತಿಗೆ ತಗುಲಿತು. ಪಾರ್ವತಿ ಜೋರಾಗಿ ಕಿರುಚಿ, ಎಚ್ಚರ ತಪ್ಪಿ ಬಿದ್ದಳು. ಹೀಗೆಲ್ಲಾ ಆಗುತ್ತದೆಂದು ನನಗೆ ಅನಿಸಿರಲೇ ಇಲ್ಲ. ಇಲ್ಲದಿದ್ದರೆ ಮೊದಲೇ ಒಳಗೆ ಹೋಗುತ್ತಿದ್ದೆ."

ಶಂಕರ ಇದನ್ನೆಲ್ಲಾ ಹೇಳುತ್ತಿದ್ದಾಗ ನನ್ನ ಅತ್ತಿಗೆ ಮತ್ತು ಅಮ್ಮ ಶಂಕರನ ಮನೆಯಿಂದ ಹೊರಗೆ ಬಂದರು. ಅಮ್ಮ ಹೇಳಿದಳು, "ಈಗ ಹುಷಾರಾಗಿದ್ದಾಳೆ. ಎದ್ದು ಕೂತಿದ್ದಾಳೆ. ನಗುನಗುತ್ತಾ ಎಲ್ಲಾ ವಿಚಾರವನ್ನೂ ಹೇಳುತ್ತಿದ್ದಾಳೆ."

"ಏನು ಹೇಳುತ್ತಿದ್ದಳು?"

"ಅದೇ, ಹೇಗೆ ಪೆಟ್ಟಾಯಿತು ಎಂದು."

"ಹೇಗೆ ಪೆಟ್ಟಾಯಿತಂತೆ?" ಈ ಪ್ರಶ್ನೆಗೆ ಅಮ್ಮ ಹೇಳಿದ ಉತ್ತರ ಕೇಳಿ ನಾನು ಮತ್ತು ಶಂಕರ್ ಇಬ್ಬರೂ ದಂಗಾಗಿ ಹೋದೆವು. ಪಾರ್ವತಿ ಇಷ್ಟೊಂದು

ತಿಳುವಳಿಕೆ ಇರುವ, ಸಹನಾಮಯಿ ಹೆಣ್ಣು ಎಂದು ನನಗೆ ಗೊತ್ತೇಇರಲಿಲ್ಲ. ಮತ್ತು ನಾನು ಅವಳನ್ನು ಹಾಗೆ ಕಲ್ಪಿಸಿಕೊಂಡೂ ಇರಲಿಲ್ಲ. ಕಲ್ಪನೆಗೆ ಮೀರಿದ ಅವಳ ನಡವಳಿಕೆ ಕಂಡು ನನಗೆ ಮಾತೇ ಬರಲಿಲ್ಲ.

ಅಮ್ಮನೆದುರು ಪಾರ್ವತಿಹೇಳಿದ್ದು ಹೀಗೆ. ಚಂಪಾ ನೀರು ಕೇಳಿದಳೆಂದು ಪಾರ್ವತಿ ಒಳಗೆ ಹೋದಳಂತೆ. ಲೋಟ ಎತ್ತರದ ಬಡುವಿನ ಮೇಲೆ ಇತ್ತು. ಅದನ್ನು ತೆಗೆದುಕೊಳ್ಳಲೆಂದು ಸ್ವಲ್ಪ ನೆಗೆದಳಂತೆ. ಮೇಲೆ ಲೋಟದ ಪಕ್ಕದಲ್ಲಿದ್ದ ಹತ್ತು ಸೇರು ಹಿಡಿಯುವ ತಪ್ಪಲೆಗೆ ಕೈತಾಕಿತು. ತಪ್ಪಲೆ ಪಾರ್ವತಿಯ ತಲೆಯ ಮೇಲೆ ಬಿತ್ತಂತೆ. ಎಚ್ಚರತಪ್ಪಿ ಬಿದ್ದಳಂತೆ.

"ಇದೆಲ್ಲಾ ಯಾರು ಹೇಳಿದ್ದು.?"



"ಪಾರ್ವತಿಯೇ..."

ಸ್ವಲ್ಪ ಹೊತ್ತಿನಲ್ಲಿಯೇ ಡಾಕ್ಟರು ಬಂದರು. ಡಾಕ್ಟರನ್ನು ಕರೆದುಕೊಂಡು, ನಾನು, ಶಂಕರ್ ಮತ್ತೆ ಒಳಗೆ ಹೋದೆವು. ಪಾರ್ವತಿ ಮುಗುಳುನಗೆಯಿಂದ ನನ್ನನ್ನು ಕುರಿತು "ಒಂದು ಮಾತು ಕೇಳಲೇ?" ಎಂದಳು. "ಹಾಂ, ಹೇಳು ಅತ್ತಿಗೆ" ಎಂದೆ ನಾನು. "ನನಗೆ ಪೆಟ್ಟಾಗದಿದ್ದರೆ ಇಷ್ಟೊಂದು ಉಪಚಾರ ಸಿಗುತ್ತಿತ್ತೆ? ನೀವಿಬ್ಬರೂ ಅಣ್ಣ, ತಮ್ಮಂದಿರು ಇಲ್ಲೇ ಇದ್ದೀರಿ. ಅಕ್ಕ ಎರಡು ಬಾರಿ ಹಾಲು ಕುಡಿಸಿದಳು. ಈಗ ನೋಡಿದರೆ, ಡಾಕ್ಟರು ಬಂದಿದ್ದಾರೆ. ದೇವರ ದಯೆಯಿಂದ ಇಂತಹಾ ಪೆಟ್ಟು ಎಲ್ಲರಿಗೂ ಸಿಗಲಿ. ಇಂತಹ ಪೆಟ್ಟಿನಿಂದ ನೋವಿಗಿಂತಲೂ ಪ್ರೀತಿಯೇ ಹೆಚ್ಚು ಸಿಗುತ್ತದೆ."

ನಾನು ಮೆಲ್ಲಗೆ ಹೇಳಿದೆ. "ನಿಮಗೆ ಆದಂತಹಾ ಪೆಟ್ಟು ಯಾರಿಗೂ ಆಗದಿರಲಿ. ಆದರೆ ದೇವರು ನಿಮಗಿರುವಂತಹಾ ನೋವನ್ನು ಸಹಿಸುವ ಶಕ್ತಿ, ಅಭ್ಯಾಸ ಎಲ್ಲರಿಗೂ ಸಿಗುವಂತೆ ಮಾಡಲಿ."

***

..... ನಾನು ರಜೆಯಲ್ಲಿ ಮತ್ತೆ ಊರಿಗೆ ಹೋಗಿದ್ದಾಗ.... ಪಾರ್ವತಿ ತನ್ನ ಪ್ರೀತಿ ಮತ್ತು ತಿಳುವಳಿಕೆಯಿಂದ ಸಂಸಾರವನ್ನು ತೃಪ್ತಿಕರವಾಗಿ ನಿಭಾಯಿಸುತ್ತಾ ಇರಬಹುದು ಎಂದು ಯೋಚಿಸಿಕೊಂಡು ಆ ಬಾರಿ ಊರಿಗೆ ಹೋಗಿದ್ದೆ.

ಆದರೆ ಪಾರ್ವತಿಯ ಬದುಕಿನಲ್ಲಿ ಹಾಗಾಗಿರಲಿಲ್ಲ. ಆ ಸಲ ಸುಮಾರು ದಿನಗಳ ನಂತರ ಮನೆಗೆ ಹೊರಟಿದ್ದೆ. ಹೋಗಿ ನೋಡಿದರೆ ಪಾರ್ವತಿ ನಮ್ಮ ಮನೆಯ ಪಡಸಾಲೆಯಲ್ಲಿ ಅಕ್ಕಿ ಆರಿಸುತ್ತಿದ್ದಳು. ನನ್ನನ್ನು ನೋಡಿದ ಕೂಡಲೇ ಎದ್ದು ನಿಂತು "ಅರೆ, ತಮ್ಮ ನೀನು ಬಂದಿದ್ದೀಯೇನು? ನಮಸ್ಕಾರ ಪರದೇಶಿ ಸಾಹೇಬರಿಗೆ" ಎಂದಳು.

"ನಮಸ್ಕಾರ ಅತ್ತಿಗೆ. ಏನು ಸಮಾಚಾರ? ಆರೋಗ್ಯ ಹೇಗಿದೆ?" ಎಂದಾಗ

"ಚೆನ್ನಾಗಿದ್ದೇನೆ. ಸ್ವಲ್ಪ ದಪ್ಪಗಾಗಿದ್ದೆ ಈ ನಡುವೆ ಅಷ್ಟೆ" ಎಂದಳು.

"ಹಾಗೆಂದರೆ?" ಎಂದು ಕೇಳಿದ ನನ್ನನ್ನು ಗೇಲಿ ಮಾಡುತ್ತಾ "ಹಾಗೆಂದರೆ ಅರ್ಥವಾಗಲಿಲ್ಲವೇನು? ಇನ್ನೇನು ಓದಿಕೊಂಡಿದ್ದೀಯಪ್ಪಾ ನೀನು? ಹೆಣ್ಣಿನ ತೂಕ ಯಾವಾಗ ಹೆಚ್ಚಾಗುತ್ತದೆ ಹೇಳು?"

"ಓ ಈಗ ಗೊತ್ತಾಯಿತು. ಶಂಕರಣ್ಣ ಹೇಗಿದ್ದಾನೆ?"

"ಚೆನ್ನಾಗಿದ್ದಾರೆ. ಇನ್ನೇನು ಬರುವ ಹೊತ್ತಾಯಿತು. ಇನ್ನೂ ನಾಲ್ಕು ತಿಂಗಳಿಗೆ ತಂದೆಯಾಗಬೇಕಾಗಿತ್ತು ಅವರು. ಮಧ್ಯದಲ್ಲಿ ಕಥೆಯೇ ಬದಲಾಯಿತು."

"ನೀವು ಯಾವಾಗಲೂ ಒಗಟಿನಲ್ಲಿ ಮಾತಾಡುತ್ತೀರಿ ಅತ್ತಿಗೆ. ನೇರವಾಗಿ ಹೇಳುವುದಿಲ್ಲ."

"ನೇರವಾದ ಮಾತು ಕೆಟ್ಟದ್ದು ತಮ್ಮ."

ನಾನು ಪಾರ್ವತಿ ಅತ್ತಿಗೆಯ ಜೊತೆ ಮಾತನಾಡುತ್ತಲೇ ನಮ್ಮ ಮನೆಯ ಒಳಗೆ ಹೋದೆ. ಅಮ್ಮ ಅದೂ ಇದೂ ಮಾತನಾಡಿದ ನಂತರ ಕೇಳಿದಳು. "ಪಾರ್ವತಿ ಏನಾದರೂ ಹೇಳಿದಳೇ?"

"ಇಲ್ಲವಲ್ಲಾ, ಏನಾಯಿತು?"

"ಆ ಬಡಪಾಯಿಗೆ ಆಗದೇ ಇರುವ ಅನ್ಯಾಯವೇ ಇಲ್ಲ. ಐದಾರು ತಿಂಗಳ ಬಸುರಿ ದಿನವೂ ತನ್ನ ಅತ್ತೆಯ ಹತ್ತಿರ, ಹತ್ತಿರದ ಊರಿನ ಡಾಕ್ಟರರ ಬಳಿ ತನ್ನ ಆರೋಗ್ಯ ಪರೀಕ್ಷೆ ಮಾಡಿಸಿಕೊಳ್ಳುತ್ತೇನೆಂದು ಹಠ ಮಾಡುತ್ತಿದ್ದಳಂತೆ. ಅವಳ ಅತ್ತೆ ಎಲ್ಲರಿಗೂ ಆದ ಹಾಗೆ ನಿನಗೂ ಆಗುತ್ತದೆ ಎನ್ನುತ್ತಿದ್ದಳು. ಅದಕ್ಕೆ ಪಾರ್ವತಿ ಒಪ್ಪಲಿಲ್ಲ. ಅವಳು ಇಂತಹಾ ಸಂದರ್ಭಗಳಲ್ಲಿ ಡಾಕ್ಟರರ ಹತ್ತಿರ ಕಡ್ಡಾಯವಾಗಿ ತಪಾಸಣೆ ಮಾಡಿಸಿಕೊಳ್ಳಬೇಕು ಎಂದು ಹೇಳುತ್ತಲೇ ಇದ್ದಳು. ಅಷ್ಟೇ ಅಲ್ಲದೆ, ಎಲ್ಲಾ ವಿಚಾರಗಳಲ್ಲೂ ಅವಳ ಕಮಲಕ್ಕ ಹೇಳಿದ ಬುದ್ಧಿಮಾತುಗಳನ್ನು ನೆನಪಿಸಿಕೊಳ್ಳುವುದು ಅವಳಿಗೆ ತುಂಬಾ ವರ್ಷಗಳಿಂದಿರುವ ಅಭ್ಯಾಸ. ಸರಿ, ಆ ದಿನವೂ ಕಮಲಕ್ಕ ಹೇಳಿದ್ದಂತೆ ಬಸಿರಿರುವ ಸಮಯದಲ್ಲಿ ಹಗುರವಾದ ಆಹಾರ ತಿನ್ನಬೇಕು, ಹಗುರವಾದ ಕೆಲಸ ಮಾಡಬೇಕು, ಹಗುರವಾದ ಬಟ್ಟೆ ತೊಟ್ಟುಕೊಳ್ಳಬೇಕು ಎಂದು ಹೇಳುತ್ತಿದ್ದಳಂತೆ. ಅವಳ ಅತ್ತೆ ಸಿಡಿಮಿಡಿಗೊಂಡು "ಈ ಹಳ್ಳಿಯಲ್ಲೇ ಅಪರೂಪವಾದ ಕೂಸು ನಿನ್ನ ಹೊಟ್ಟೆಯಲ್ಲಿದೆಯೇನು" ಎಂದಳು. "ಹೌದು ಅಮ್ಮಾ, ನೋಡುತ್ತಿರಿ ಅದನ್ನು ಎಷ್ಟು ಅಪರೂಪದ ಮಗುವನ್ನಾಗಿ ಮಾಡುತ್ತೇನೆ" ಎಂದು ಉತ್ತರಿಸಿದ್ದಳಂತೆ ಪಾರ್ವತಿ.

"ಹೂ, ನೀನೊಂದು ಅಪರೂಪದ ಹೆಣ್ಣು, ಇನ್ನೊಂದು ನಿನ್ನ ಆ ಮಗು" ಅಣಕಿಸುತ್ತಾ ಹೇಳಿದ ಅತ್ತೆಗೆ "ಮಕ್ಕಳೆಲ್ಲಾ ಒಂದೇ ತರಹಾ ಇರುತ್ತಾರೆ. ತಂದೆ ತಾಯಿಗಳೇ ಅವರನ್ನು ಅಪರೂಪದ ಮಕ್ಕಳುಗಳನ್ನಾಗಿ ಬದಲಾಯಿಸಬೇಕಾದದ್ದು" ಎಂದು ಹೇಳಿದಳು ಪಾರ್ವತಿ.

"ಹಾಗಾದರೆ ನಾನೇನು ಮಕ್ಕಳನ್ನೇ ಹೆತ್ತಿಲ್ಲವೇನು?"

"ಯಾಕಿಲ್ಲ ಅಮ್ಮ? ಇಲ್ಲದಿದ್ದರೆ ಇಷ್ಟೊಂದು ಒಳ್ಳೆಯ ಗಂಡ ನನಗೆ ಸಿಗುತ್ತಿದ್ದರೇ?"

"ಹಾಗಾದರೆ ನಿನ್ನ ಹೊಟ್ಟೆಯಲ್ಲಿರುವ ಮಗುವಿನದೇನು ವಿಶೇಷ? ಏಕೆ ಡಾಕ್ಟರರ ಹತ್ತಿರ ತಪಾಸಣೆ ಮಾಡಿಸುವುದಕ್ಕೆ ಹೋಗಬೇಕು?"

"ನಮ್ಮ ಕಮಲಕ್ಕ ಹೇಳುತ್ತಿದ್ದಳು..."

"ಬೆಂಕಿ ಬಿತ್ತು ಆ ನಿನ್ನ ಕಮಲಕ್ಕನಿಗೆ ಮತ್ತು ನಿನಗೆ. ಮನೆ ಹೊಸಲು ದಾಟಿ ಹೊರಗೆ ಹೋದರೆ ನೋಡು. ನಿನ್ನ ಕಾಲು ಮುರಿಯುತ್ತೇನೆ."

"ಬೇಡ ಹಾಗೆ ಮಾಡಬೇಡ ಅಮ್ಮಾ." ಪಾರ್ವತಿ ನಗುತ್ತಾ, "ಇನ್ನೂ ನಾಲ್ಕು ತಿಂಗಳಾದ ಮೇಲೆ ಒಬ್ಬ ಪುಟ್ಟ ಅತಿಥಿ ಈ ಮನೆಯ ಅಂಗಳಕ್ಕೆ ಬರುತ್ತಾನೆ. ಅವನೇನಾದರೂ ಅವನ ಅಮ್ಮ ಕುಂಟಿ ಎಂದು ತಿಳಿದರೆ ಎಷ್ಟೊಂದು ದುಃಖಪಡುತ್ತಾನೆ ಅಲ್ಲವೆ? ಅಷ್ಟೇಅಲ್ಲದೆ ಅವನ ಅಜ್ಜಿಯೇ ಅವನ ತಾಯಿಯ ಕಾಲು ಮುರಿದದ್ದು ಎಂದು ಅವನಿಗೆ ತಿಳಿದರೆ ಅವನು ನಿನ್ನ...."

"ಹಾಹಾ.. ಹೇಳು. ಮುಂದೆ ಹೇಳು.. ಅವನು ನನ್ನ ಕಾಲನ್ನು ಮುರಿಯುತ್ತಾನೆ. ಅಲ್ಲವೇನು? ನನ್ನ ಕಾಲು ಮುರಿಯುವುದಕ್ಕಾಗಿ ನೀನು ಮಗುವನ್ನು ಹೆರುತ್ತಿದ್ದೀಯಾ? ಕೆಟ್ಟ ಹೆಣ್ಣೆ, ಬರಬರುತ್ತಾ ನಿನ್ನ ನಾಲಿಗೆ ಉದ್ದವಾಯಿತು" ಎಂದವಳೇ ಅವಳತ್ತೇ ಅವಳನ್ನು ಬಲವಾಗಿ ದೂಡಿದಳಂತೆ. ದೇವರೇ ಬಲ್ಲ ಏನಾಯಿತು ಎಂಬುದನ್ನು! ಲಾಟಿ. ದೊಣ್ಣೆಗಳಿಂದ ಅವಳನ್ನು ಹೊಡೆದಳು ಎಂದೂ ಜನ ಹೇಳುತ್ತಾರೆ. ಆಗಷ್ಟೇ ಹೊರಗಿನಿಂದ ಒಳಗೆ ಬಂದ ಶಂಕರ್ ಇದನ್ನು ನೋಡಿ ಕೋಪದಿಂದ ಅವನ ತಾಯಿಯನ್ನು ಹೊಡೆಯಲು ಪ್ರಾರಂಭಿಸಿದ. ಪಾರ್ವತಿ ಇದನ್ನು ನೋಡಿ ಅತ್ತೆಗೆ ಏಟು ಬೀಳದಿರಲಿ ಎಂದು ಅಡ್ಡ




**ಅತ್ತೆಗೆ ಏಟು ಬೀಳುವುದನ್ನು ಪಾರ್ವತಿ ತಪ್ಪಿಸಿದಳು**

ಹೋದಳು. ಶಂಕರನ ಕೈ ಏಟುಗಳೂ ಅವಳಿಗೇ ಬಿದ್ದವು. ಈ ಮಾರಾಮಾರಿಯಲ್ಲಿ ಅವಳ ಹೊಟ್ಟೆಗೆ ಪೆಟ್ಟು ಬಿತ್ತು. ಮೈ ಇಳಿದುಹೋಯಿತು. ಈ ಎಲ್ಲಾ ಸಂಗತಿಗಳಿಂದ ದುಃಖಗೊಂಡ ಶಂಕರ ಇನ್ನು ತಾವು ಆಮನೆಯಲ್ಲಿ ಇರುವುದಿಲ್ಲ ಎಂದು ನಿಶ್ಚಯಿಸಿ ತಮ್ಮ ಸಾಮಾನುಗಳನ್ನೆಲ್ಲಾ ತಂದು ಹೊರಗಡೆ, ನಿಂಬೆಗಿಡದ ಕೆಳಗೆ ಹಾಕಿದ. ಪಾಪ, ಪಾರ್ವತಿ ಎರಡು ದಿನ ಎಡಬಿಡದ ಚಳಿ, ಬಿಸಿಲು, ಗಾಳಿಯಲ್ಲಿ, ಆ ದೇಹಸ್ಥಿತಿಯಲ್ಲಿ ಗಿಡದ ಕೆಳಗೇ ಕಳೆದಳು. ನಾನು ತುಂಬಾ ಹೇಳಿದ ಮೇಲೆ ನಮ್ಮ ಮನೆಯ ಅಂಗಳದಲ್ಲಿ ಇರಲು ಬಂದರು. ಅಂಗಳಕ್ಕೆ ಅಂಟಿಕೊಂಡಂತೆ ಇರುವ, ಕಟ್ಟಿಗೆ, ಹುಲ್ಲು ತುಂಬಿಸುವ ಕೋಣೆ ಇದೆಯಲ್ಲಾ, ಅಲ್ಲಿ ಸಾಮಾನುಗಳನ್ನು ಇಟ್ಟಿದ್ದಾರೆ. ತುಂಬಾ ತಕರಾರು ಮಾಡಿ ಆಮೇಲೆ ಶಂಕರನ ಅಪ್ಪ, ಅಣ್ಣ ಕೇವಲ ಒಂದು ಕುಂಟೆ ಜಮೀನು, ಒಂದು ಎತ್ತು ಕೊಟ್ಟಿದ್ದಾರೆ. ಅಷ್ಟರಲ್ಲಿ ಹೇಗೆ ಸಂಸಾರ ನಡೆಸುತ್ತಾರೋ ನನಗಂತೂ ತೋಚುತ್ತಿಲ್ಲ."

"ನನ್ನನ್ನು ಬೈಯ್ಯುತ್ತಿದ್ದೀರಾ ಅಮ್ಮ" ಎನ್ನುತ್ತಾ ಪಾರ್ವತಿಅತ್ತಿಗೆ ಎದುರಿಗೆ ಬಂದು ನಿಂತಳು. "ತಮ್ಮಾ, ನೀನೆಂದರೆ ನನಗೆ ತುಂಬಾ ಇಷ್ಟ. ಆದ್ದರಿಂದಲೇ ನಮ್ಮ ಮನೆ ಬಿಟ್ಟು ನಿಮ್ಮ ಮನೆಗೆ ಬಂದಿದ್ದೇನೆ... ನಿನಗೆ ಏನನ್ನಿಸುತ್ತಿದೆ?"

"ನನಗಾ .....?" ಎನ್ನುತ್ತಾ ಅತ್ತಿಗೆಯನ್ನೇ ಸ್ವಲ್ಪ ಹೊತ್ತು ದಿಟ್ಟಿಸಿ ನೋಡಿ, ಆಲೋಚಿಸತೊಡಗಿದೆ. - "ಈ ಹೆಣ್ಣನ್ನು ಯಾರೂ ಅಳಿಸಲು ಸಾಧ್ಯವಿಲ್ಲ. ನೋವು ಬಂದಾಗ ಅಳುವವರ ಹತ್ತಿರ ದುಃಖ ಓಡೋಡಿ ಬರುತ್ತದೆ. ಈಕೆ ಯಾವಾಗಲೂ ನಗುತ್ತಿರುತ್ತಾಳೆ. ದುಃಖವು ಬೇರೆ ವೇಷ ಹಾಕಿಕೊಂಡು ಬಂದರೂ ಕೂಡಾ, ಪಾರ್ವತಿ ಅದನ್ನು ಗುರುತು ಹಿಡಿದು ದೂರ ಓಡಿಸಿ ಬಿಡುತ್ತಾಳೆ. ಅಮ್ಮ ಹೇಳಿದ್ದನ್ನು ಕೇಳಿ ನಾನು ದುಃಖಪಟ್ಟೆ. ಅಮ್ಮ ದುಃಖಿಸಿದಳು. ಶಂಕರನಂತೂ ತುಂಬಾ ವ್ಯಥೆಪಡುತ್ತಿದ್ದಾನೆ. ಆದರೆ, ಪಾರ್ವತಿ ಅತ್ತಿಗೆ... ಇವಳ ಮೈಮನಗಳು ಸ್ವಭಾವ, ವ್ಯವಹಾರಗಳನ್ನು ಯಾವ ಮಣ್ಣಿನಿಂದ ಮಾಡಲಾಗಿದೆಯೋ ಆ ದೇವರೇ ಬಲ್ಲ!" ಯೋಚನೆಯಿಂದ ಹೊರಬಂದ ನಾನು "ಅತ್ತಿಗೆ, ಅಮ್ಮ ನಡೆದದ್ದನ್ನೂ ವಿವರವಾಗಿ ಹೇಳಿದಳು. ಕೇಳಿ ತುಂಬಾ ದುಃಖವಾಯಿತು." ಎಂದೆ.

ಏನೇ ಆದರೂ, ಆದದ್ದೆಲ್ಲಾ ಒಳ್ಳೆಯದಕ್ಕೆ. ಈಗ ಪಾರ್ವತಿ ಅತ್ತಿಗೆ, ಅವಳ ಗಂಡ ಶಂಕರ ಮತ್ತು ಆ ಒಂದು ಎತ್ತು ಇಷ್ಟೇ ಇರುವುದು. ಈ ಮೂರು ಜೀವಗಳಿಗೆ ಸೇರಿದಂತೆ ಬರೀ ಒಂದು ಕುಂಟೆ ಗದ್ದೆ.

ಆ ದಿನ ಮೊದಲ ಬಾರಿಗೆ ಅತ್ತಿಗೆಯ ಕೋಣೆಯ ಕಡೆ ಹೋದೆ. ನೋಡಿದರೆ ಆ ಹುಲ್ಲು, ಕಟ್ಟಿಗೆ ತುಂಬುವ ಪುಟ್ಟ ಕೋಣೆಯನ್ನು ದೇವರ ಮನೆಯ ಹಾಗೆ ಬದಲಾಯಿಸಿಬಿಟ್ಟಿದ್ದಳು. ಆ ಕೋಣೆಯನ್ನು ನೋಡಿದ ನಾನು ನನಗೆ ತಿಳಿಯದಂತೆ 'ತುಂಬಾ ಚೆನ್ನಾಗಿದೆ' ಎಂದೆ.

ಅಷ್ಟರಲ್ಲಿ ಶಂಕರಣ್ಣ ಬಂದನು. ಮಾತುಕತೆಯ ಮಧ್ಯೆ ಅವನು ಹೇಳಿದನು "ತಮ್ಮ, ನಾವು ಅಲ್ಲಿಂದ ಹೊರಗಡೆ ಬಂದಿದ್ದು ಒಳ್ಳೆಯದೇ ಆಯಿತು. ಇಲ್ಲಿ ಕಡಿಮೆ

ಸ್ಥಳ ಇರಬಹುದು. ನಮ್ಮ ಹತ್ತಿರ ಸ್ವಲ್ಪವೇ ಸಾಮಾನಿರಬಹುದು. ಆದರೆ ತುಂಬಾ ಸುಖಶಾಂತಿ ಇದೆ."

"ಸುಖಕ್ಕೆ ನಿನಗೆ ಸಾಮಾನು ಏಕೆ ಬೇಕು? ಬರೀ ಪಾರ್ವತಿ ಅತ್ತಿಗೆಯ ಸಹವಾಸ ಸಾಲದೇನು?" ಎಂದೆ ನಾನು. ನನ್ನ ಮಾತಿನಿಂದ ಇಬ್ಬರೂ ನಕ್ಕರಾದರೂ ಶಂಕರಣ್ಣ ಮನಸಾರೆ ನಗಲಿಲ್ಲ ಎನಿಸಿತು. "ಏನಣ್ಣ, ಏನೋ ಚಿಂತೆಯಲ್ಲಿದ್ದೀಯ. ನಮ್ಮಲ್ಲಿ ಹೇಳಬಾರದೆ?" ಎಂದೆ."ಇಲ್ಲವಲ್ಲಾ" ಎನ್ನುತ್ತಾ ಮೊದಲು ಮಾತು ಮರೆಸಲು ಪ್ರಯತ್ನಿಸಿದನು. ಆದರೆ ಕೊನೆಗೆ ತಡೆಯದೆ ಹೇಳಿದ. "ಈಗ ನನ್ನ ಹತ್ತಿರ ಇರುವುದು ಒಂದೇ ಎತ್ತು. ಜೊತೆಗೆ ಇನ್ನೊಂದು ಸಿಕ್ಕಿದ ಹೊರತು ನನಗೆ ಭೂಮಿ ಉಳುವುದು ಸಾಧ್ಯವಾಗುವುದಿಲ್ಲ. ಇದು ಉಳುಮೆಯ ಕಾಲ. ಎಲ್ಲರ ಎತ್ತುಗಳಿಗೂ ಕೆಲಸ. ಪುರುಸೊತ್ತಿನಲ್ಲಿ ಯಾರೂ ಇರುವುದಿಲ್ಲ. ಎತ್ತಿಗಾಗಿ ನಾನು ಯಾರನ್ನೂ ಕೇಳುವ ಹಾಗಿಲ್ಲ. ಇರುವ ಒಂದು ಕುಂಟೆ ಜಮೀನನ್ನು ಕೂಡಾ ಬೀಳು ಬಿಡಬೇಕಾಗುವುದೋ ಏನೋ ಎಂದು ಚಿಂತೆಯಾಗಿದೆ."

"ಬೀಳು ಬಿಡಬೇಕಾದ ಪರಿಸ್ಥಿತಿ ಯಾಕೆ ಬರುತ್ತದೆ?" ಪಾರ್ವತಿ ಹೇಳಿದಳು. "ಗಂಡಸಾಗಿ ಹೀಗೆ ಮಾತಾಡುತ್ತಿದ್ದೀರಲ್ಲಾ? ಇರಲಿ. ಈಗ ಸದ್ಯಕ್ಕೆ ಅದರ ಚಿಂತೆ ಬೇಡ. ನಿಮ್ಮ ತಮ್ಮ ಬಂದಿದ್ದಾನೆ. ಅವನಿಗೆ ಏನಾದರೂ ತಿನ್ನಲು, ಕುಡಿಯಲು ಕೊಟ್ಟು ಉಪಚಾರ ಮಾಡೋಣ. ಆಮೇಲೆ ಹೇಗೆ, ಏನು ಮಾಡಬೇಕೆಂದು ನಾನು ಹೇಳುತ್ತೇನೆ. ಒಂದಂತೂ ನಿಜ. ನೇಗಿಲು ಚಲಿಸುತ್ತದೆ ಮತ್ತು ಜಮೀನಿನ ಉಳುಮೆ ಆಗುತ್ತದೆ."

ಏನು ಮಾಡಬಹುದು ಅವಳು ಎಂಬುದರ ಕಲ್ಪನೆಯೂ ನನಗಿರಲಿಲ್ಲ. ನನ್ನ ಎತ್ತುಗಳಿಗೂ ನಮ್ಮ ಜಮೀನಿನಲ್ಲಿ ಉಳುಮೆಯ ಕೆಲಸವಿತ್ತು. ಎಲ್ಲರಿಗೂ ಅವರವರ ಭೂಮಿಯ ಉಳುಮೆ ಆಗಬೇಕಿತ್ತು. ನಾನು ಸುಮ್ಮನೆ ಕುಳಿತಿದ್ದೆ. ಶಂಕರಣ್ಣ ಸಪ್ಪೆ ಮುಖ ಹಾಕಿ ಕುಳಿತಿದ್ದ. ಪಾರ್ವತಿ ಅತ್ತಿಗೆ ಬಿಸಿಬಿಸಿ ಪಕೋಡಾಗಳನ್ನು ತಂದು ಮುಂದಿಟ್ಟು

ಹೇಳಿದಳು. "ಇಲ್ಲಿ ನೋಡಿ, ಇಬ್ಬರೂ ಯಾರ ಕೈಯ್ಯಿಂದಲೋ ಏಟು ತಿಂದು ಬಂದ ಹಾಗೆ ಕುಳಿತಿದ್ದೀರಲ್ಲಾ. ನಾನು ಹೇಳುತ್ತೇನೆ ಕೇಳಿ. ಭೂಮಿಯ ಉಳುಮೆ ಆಗುತ್ತದೆ ಈ ರಾತ್ರಿಯೇ ಆಗುತ್ತದೆ."

"ಈ ರಾತ್ರಿಯಲ್ಲೇ.....?" ಅಣ್ಣ ಕೇಳಿದ. ನಾನೂ ಹೌಹಾರಿ "ರಾತ್ರಿಯಲ್ಲೇ?" ಎಂದೆ. "ಹಾ.... ಹೌದು. ರಾತ್ರಿಯಲ್ಲಿ. ಇಂದಿನ ಬೆಳದಿಂಗಳ ರಾತ್ರಿಯಲ್ಲಿ. ಆಶ್ವೀಜಮಾಸದ ಚಂದ್ರನ ಬೆಳಕಿನಲ್ಲಿ ರಾತ್ರಿಯೂ ದಿನದಂತೆ ಬೆಳಗುತ್ತಿರುತ್ತದೆ" ಎಂದಳು.

"ಆದರೂ ಎತ್ತಿಲ್ಲದೆ..."

"ಓಹ್...ಓ... ನೀವು ಚಿಂತೆ ಮಾಡುವುದನ್ನು ಬಿಟ್ಟು, ಪಕೋಡಾ ತಿನ್ನಿ."

ಮುಸ್ಸಂಜೆ ಹೊತ್ತಿನಲ್ಲಿ ಆಕಾಶದ ಕಡೆ ನೋಡಿದೆ. ಚಂದ್ರ ಹುಟ್ಟಿ ಸ್ವಲ್ಪವೇ ಹೊತ್ತಾಗಿತ್ತು. ಮಹಡಿಯ ಮೇಲಿದ್ದ ನನಗೆ ನೇಗಿಲು ತೆಗೆದುಕೊಂಡು ಮುಂದೆ ಮುಂದೆ ಹೋಗುತ್ತಿದ್ದ ಶಂಕರ್, ಎತ್ತನ್ನು ಹಿಡಿದುಕೊಂಡು ಅವನ ಹಿಂದೆ ಹೋಗುತ್ತಿದ್ದ ಅತ್ತಿಗೆ ಕಂಡರು. ಒಂದು ಎತ್ತಿನ ಸಹಾಯದಿಂದ ಹೇಗೆ ನೆಲ ಉಳುತ್ತಾರೆಂದು ನನಗೆ ಅರ್ಥವಾಗಲಿಲ್ಲ. ಕುತೂಹಲವೆನಿಸಿ ಅವರನ್ನು ಹಿಂಬಾಲಿಸಿದೆ. ಆಕಾಶದಲ್ಲಿ ಚಂದ್ರ ಇನ್ನೂ ಮೇಲೆ ಬಂದಾಗ ನಾನು ಜಮೀನಿನ ದಾರಿಯಲ್ಲಿ ಕಾಲು ಹಾಕತೊಡಗಿದೆ. ನಿಜವಾಗಿಯೂ ತಿಂಗಳ ಬೆಳಕು ದಿನದ ಬೆಳಕಿನಷ್ಟೇ ಪ್ರಕಾಶಮಾನವಾಗಿತ್ತು.

ನಾನು ಹೆಚ್ಚು ಗದ್ದಲಮಾಡದೆ, ಶಂಕರನ ಜಮೀನು ತಲುಪಿದೆ. ನೋಡುತ್ತೇನೆ. ನೇಗಿಲಿನ ನೊಗದ ಒಂದು ಕಡೆಗೆ ಎತ್ತು, ಇನ್ನೊಂದು ಕಡೆಗೆ ಬಗ್ಗಿ ನಿಂತಿದ್ದ ಪಾರ್ವತಿ! ಶಂಕರಣ್ಣ ನೇಗಿಲನ್ನು ನಡೆಸುತ್ತಿದ್ದ. ಮೈನವಿರೆದ್ದ ಆ ಕ್ಷಣದಲ್ಲಿ ನನಗೆ ಅನ್ನಿಸಿತು. ಈಕೆ ಪಾರ್ವತಿ ಅತ್ತಿಗೆಯಲ್ಲ. ಬದಲಾಗಿ ಯಾವುದೋ ಶಕ್ತಿ, ಶ್ರದ್ಧೆ, ಧೈರ್ಯಗಳು ಇದರೊಂದಿಗೆ ಸೇರಿ, ಈ ಹೆಣ್ಣು ರೂಪದಲ್ಲಿ ಶಂಕರಣ್ಣನ ಜೀವನದಲ್ಲಿ ಜೊತೆಯಾಗಿ ಬಂದಿದೆ.



**ನೊಗವನ್ನು ಎಳೆಯುತ್ತಿರುವ ಪಾರ್ವತಿ**

ಈ ಶಕ್ತಿ ಜೊತೆಯಲ್ಲಿರುವವರೆಗೂ ಜೀವನದ ಎಲ್ಲಾ ಸಮಸ್ಯೆ, ಹೋರಾಟಗಳನ್ನು ಎದುರಿಸುತ್ತಾರೆ. ಈ ನೇಗಿಲು ಭೂಮಿಯನ್ನು ಇಬ್ಭಾಗ ಮಾಡಿದಷ್ಟೇ ಸುಲಭವಾಗಿ ಬಿಡಿಸುತ್ತಾ ಹೋಗುತ್ತಿರುತ್ತಾರೆ.

ಅಷ್ಟರಲ್ಲಿ ನನ್ನನ್ನು ನೋಡಿದ ಶಂಕರ್ ಮತ್ತು ಪಾರ್ವತಿ, ಎತ್ತು ನೇಗಿಲುಗಳನ್ನು ಅಲ್ಲಿಯೇ ಬಿಟ್ಟು ನನ್ನ ಬಳಿಗೆ ಬಂದರು. "ಅರೆ, ತಮ್ಮ ನೀನು ಇಲ್ಲಿ ಏನು ಮಾಡುತ್ತಿರುವೆ?" ಎಂದ ಶಂಕರಣ್ಣನಿಗೆ ನಾನು ಹೇಳಿದೆ. "ನೀನು ಯಾವ ಎತ್ತನ್ನು ನಿನ್ನ ಒಂದು ಎತ್ತಿನ ಜೊತೆಗೆ ಕಟ್ಟುವೆ ಎಂದು ನೋಡಲು ಬಂದಿದ್ದೆ. ಆದರೆ ನನಗೆ ಗೊತ್ತಿರಲಿಲ್ಲ. ನೀನು ಹೀಗೆ..."

"ಎತ್ತಿನ ಬದಲಾಗಿ ಸಿಂಹವನ್ನು ಕಟ್ಟುತ್ತೀಯಾ ಎಂದು" ಎನ್ನುತ್ತಾ ಪಾರ್ವತಿ ಅತ್ತಿಗೆ ನನ್ನ ಮಾತನ್ನು ಪೂರ್ತಿ ಮಾಡಿದಳು. ತನ್ನ ಗುಣವನ್ನು ತನ್ನ ಬಾಯಿಂದಲೇ

ವಿವರಿಸಿದ ಅತ್ತಿಗೆಯ ಈ ಮಾತು ನನಗೆ ತುಂಬಾ ಇಷ್ಟವಾಯಿತು. ವಾತಾವರಣವನ್ನು ಹಗುರಮಾಡಿದ ಆ ಮಾತಿನಿಂದ ನಾವೆಲ್ಲರೂ ನಕ್ಕೆವು.

ದಿನಕಳೆದಂತೆ, ಆ ಬರೀ ಒಂದು ಕುಂಟೆ ಜಮೀನಿನಲ್ಲಿ ಶಂಕರ, ಪಾರ್ವತಿ ಬೇಸಾಯ ಮಾಡಿಕೊಳ್ಳುವುದನ್ನು ಕಲಿತರು. ತರಕಾರಿ, ಗೋಧಿ, ಕಡ್ಲೆಕಾಳು ಎಲ್ಲವನ್ನೂ ಸ್ವಲ್ಪ ಬೆಳೆದರು. ಅನೇಕ ಬಾರಿ ಮಾರಿದ್ದೂ ಉಂಟು. ನಾನು ಯಾವಾಗ ಊರಿಗೆ ಹೋದರೂ ಅತ್ತಿಗೆಯ ಸಡಗರದ ಸ್ವಾಗತ, ರುಚಿಕರ ಅಡಿಗೆ, ಪ್ರೀತಿಯ ಉಪಚಾರ ಯಾವುದೂ ತಪ್ಪುತ್ತಿರಲಿಲ್ಲ. ಕಷ್ಟವಿರಲಿ, ಸುಖವಿರಲಿ ಎರಡರಲ್ಲೂ ಪಾರ್ವತಿ ಅತ್ತಿಗೆಯ ಮುಖದ ಮೇಲಿನ ನಗೆ ಮಾತ್ರ ಮಾಸುತ್ತಲೇ ಇರಲಿಲ್ಲ.

ಹಾ... ಒಮ್ಮೆ ಕೇವಲ ಒಮ್ಮೆ ಅತ್ತಿಗೆಯ ಮುಖದಲ್ಲಿ ದುಗುಡ. ಕಣ್ಣಲ್ಲಿ ನೀರು ನೋಡಿದ್ದೆ ನಾನು.

ಅದು ಅತ್ತಿಗೆ ಮತ್ತು ಶಂಕರಣ್ಣ ನಮ್ಮ ಹಳ್ಳಿ ಬಿಟ್ಟು ಕಾನ್ಪುರಕ್ಕೆ ಹೋಗಬೇಕಾದ ಸಂದರ್ಭ ಒದಗಿದಾಗ. ಆಗ ಅತ್ತಿಗೆ ಐದಾರು ತಿಂಗಳ ಬಸುರಿ. ಸರಿಯಾದ ಡಾಕ್ಟರಿಂದ ತಪಾಸಣೆ ಮಾಡಿಸಿಕೊಳ್ಳಬೇಕು ಮತ್ತು ಎಲ್ಲಾ ಅನುಕೂಲಗಳೂ ಇರುವ ಕಡೆ ತಾನು ಇರಬೇಕು ಎನ್ನುವುದು ಅವಳ ಇಷ್ಟ. ಅದೇ ಸಮಯಕ್ಕೆ ಅತ್ತಿಗೆಯ ಅಣ್ಣಾ ರಾಮಲಾಲ, ಕಾನ್ಪುರಕ್ಕೆ ಬರಬೇಕೆಂದು ಕರೆದ. ರಾಮಲಾಲ್‌ಗೆ ಕಾನ್ಪುರದ ಸ್ವದೇಶಿ ಮಿಲ್ಲಿನಲ್ಲಿ ಕೆಲಸ. ಆತ ಶಂಕರನಿಗೆ ಕೆಲಸ, ಮನೆ ಎಲ್ಲವನ್ನೂ ಕೊಡಿಸುವ ಭರವಸೆ ಕೊಟ್ಟಿದ್ದನು. ಸದ್ಯಕ್ಕೆ ಪುಟ್ಟದಾಗಿರುವ ಸಂಸಾರ. ನಾಳೆ ಬೆಳೆದು ದೊಡ್ಡದಾಗುತ್ತದೆ. ಒಂದು ಕುಂಟೆ ಜಮೀನಿನಿಂದ ಮಕ್ಕಳನ್ನು ಬೆಳೆಸುವುದು ಕಷ್ಟ. ಈ ನಿಜಾಂಶ ಅವರನ್ನು ಹಳ್ಳಿ ಬಿಟ್ಟು ಕಾನ್ಪುರದ ದಾರಿ ಹಿಡಿಯುವಂತೆ ಮಾಡಿತು.

***

"ದಿಲ್ಲಿ ಬಂತು ಮಗು..." ಎಂದು ಆ ಮುದುಕಿ ಹೇಳಿದಾಗ "ಹೌದು ಅಜ್ಜಿ" ಎನ್ನುತ್ತಾ, ಆಕೆಯನ್ನೂ ಇಳಿಸಿಕೊಂಡು ನಾನು ಇಳಿದೆ. ಆಕೆಯನ್ನು ಆಕೆಯ

ಮನೆ ತಲುಪಿಸುವ ವ್ಯವಸ್ಥೆ ಮಾಡಿದೆ. ನಾನು, ಭಾಗವಹಿಸಬೇಕಾದ ಮೀಟಿಂಗ್‌ಗೆಂದು ಮೊದಲೇ ನಿಗದಿತವಾದ ಜಾಗಕ್ಕೆ ಹೋದೆ. ಬೇರೆ ಬೇರೆ ಕೆಲಸಗಳಲ್ಲಿ ನಾನು ಸಿಕ್ಕಿಕೊಂಡೆ. ಆದರೂ ನನ್ನ ಮನಸ್ಸಿನ ಪರದೆಯ ಮೇಲೆ ಪಾರ್ವತಿ ಅತ್ತಿಗೆಯ ಚಿತ್ರ ಪದೇ ಪದೇ ಬರುತ್ತಿತ್ತು. ವಾಪಸ್ಸಾಗುವಾಗ ಕಾನ್ಪುರದಲ್ಲಿಳಿದು ಅತ್ತಿಗೆಯನ್ನು ನೋಡಲೇಬೇಕೆಂದು ಅಂದುಕೊಂಡೆ.

ಮಾರನೆಯ ದಿನ ಬೆಳಿಗ್ಗೆ ಕಾನ್ಪುರ ಸ್ಟೇಷನ್‌ನಲ್ಲಿ ಇಳಿದೆ. ಸ್ಟೇಷನ್ ಹೊರಗಡೆ ಶಾಸ್ತ್ರಿನಗರ್‌ಗೆ ಹೋಗುವ ಬಗ್ಗೆ ವಿಚಾರಿಸುತ್ತಿದ್ದಂತೆ ನನ್ನ ಪಕ್ಕದಲ್ಲಿ ಒಂದು ಆಟೋ ಬಂದು ನಿಂತಿತು.

"ನಮಸ್ಕಾರ ಚಿಕ್ಕಪ್ಪಾ" ಎನ್ನುವ ದನಿ ಬಂದ ಕಡೆಗೆ ತಿರುಗಿದೆ. ಸುಮಾರು ಇಪ್ಪತ್ತು ವರ್ಷದ ಯುವಕನೊಬ್ಬ ನಿಂತಿದ್ದ. "ನನ್ನ ಹೆಸರು ಗಣೇಶ್ ಎಂದು. ನೀವು ಸನಾತನ್ ಚಿಕ್ಕಪ್ಪ ಅಲ್ಲವೆ? ಅಮ್ಮ ಹೇಳಿದ್ದಳು. ನೀವು ದೆಹಲಿಯಿಂದ ಬರುವ ರೈಲಿಗೆ ಬರುತ್ತೀರಿ ಎಂದು. ನಿಮ್ಮ ಕೈಯಲ್ಲಿ ಕೆಂಪು ಸೂಟ್‌ಕೇಸ್, ಕಣ್ಣಿಗೆ ಕನ್ನಡಕ ಇರುತ್ತದೆಂದೂ ಹೇಳಿದ್ದಳು" ಎನ್ನುತ್ತಾ ನಸುನಕ್ಕನು.

ಅವನ ಮಾತು, ನಗೆ, ನಡೆ-ನುಡಿಗಳಿಂದ ಇವನು ಪಾರ್ವತಿಯ ಮಗನೆಂದು ತಿಳಿದುಕೊಂಡೆ. ಕಾನ್ಪುರಕ್ಕೆ ಬರುವಾಗ ಇವನನ್ನೇ ತಾನೇ ಅತ್ತಿಗೆ ತನ್ನ ಹೊಟ್ಟೆಯಲ್ಲಿ ಹೊತ್ತುಕೊಂಡಿದ್ದುದು!

ಮನೆಯ ದಾರಿ ಹಿಡಿದು ಹೊರಟೆವು. ದಾರಿಯಲ್ಲಿ ಗಣೇಶನನ್ನು ಕುರಿತು "ನೌಕರಿಯಲ್ಲಿದ್ದೀಯೇನು?" ಎಂದೆ. "ಇಲ್ಲ ಚಿಕ್ಕಪ್ಪ. ಈ ಆಟೋ ನನ್ನದು. ಬಿ.ಎ. ಆದ ಮೇಲೆ ಅಮ್ಮ ಇದೇ ಉದ್ಯೋಗ ಮಾಡು ಎಂದಳು. ಇದನ್ನೇ ಮಾಡುತ್ತಿದ್ದೇನೆ. ನಮ್ಮ ಬಡಾವಣೆಯಲ್ಲಿ ಹದಿನೈದಿಪ್ಪತ್ತು ಹುಡುಗರು ಬಿ.ಎ. ಪಾಸು ಮಾಡಿ ಕೆಲಸವಿಲ್ಲದೆ ಅಲೆಯುತ್ತಿದ್ದರು. ಅಮ್ಮ ಬಹಳ ಪ್ರಯತ್ನಿಸಿ ಅವರೆಲ್ಲರ ಹೆಸರನ್ನು ರೋಜ್‌ಗಾರ್

ಯೋಜನೆಯಲ್ಲಿ ನೋಂದಾಯಿಸಿದಳು. ಬ್ಯಾಂಕ್‌ನಿಂದ ಹಣ ಮಂಜೂರು ಮಾಡಿಸಿ ಪ್ರತಿಯೊಬ್ಬರಿಗೂ ಒಂದೊಂದು ಆಟೋ ತೆಗೆಸಿಕೊಟ್ಟಿದ್ದಾಳೆ. ಈಗ ಎಲ್ಲರೂ ಸಂತೋಷವಾಗಿದ್ದಾರೆ. ಪ್ರತಿ ತಿಂಗಳೂ ಬ್ಯಾಂಕಿಗೆ ಕಟ್ಟಬೇಕಾದ ಸಾಲವನ್ನು ಕಟ್ಟುವುದೇ ಅಲ್ಲದೆ ಸುಮಾರು ಹಣ ಉಳಿತಾಯ ಮಾಡುತ್ತಾರೆ ಕೂಡಾ'' ಎಂದು ಉತ್ತರಿಸಿದ.

''ಇದೆಲ್ಲಾ ನಿಮ್ಮ ಅಮ್ಮ ಮಾಡಿದಳೇನು'' ಎಂದೆ.

''ಹೌದು ಚಿಕ್ಕಪ್ಪ. ಅವಳು ಇನ್ನೂ ಏನೆಲ್ಲಾ ಮಾಡಿದ್ದಾಳೆಂದು ನೀವು ತಿಳಿದರೆ ಆಶ್ಚರ್ಯಪಡುತ್ತೀರಿ. ನಮ್ಮ ಬಡಾವಣೆಯ ಜನ ಅವಳನ್ನು ಇಂದಿರಾಗಾಂಧಿ ಎನ್ನುತ್ತಾರೆ.''

''ಹೌದೇ? ನಿಮ್ಮ ಅಮ್ಮನ ಸಾಧನೆಗಳನ್ನು ನಿನ್ನ ಬಾಯಿಂದಲೇ ಕೇಳುತ್ತೇನೆ. ಹೇಳು.''

''ಚಿಕ್ಕಪ್ಪ, ನನ್ನ ಅಮ್ಮ ನಮ್ಮ ಬಡಾವಣೆಯಲ್ಲಿ ಮಹಿಳಾ ಮಂಡಲಿಯೊಂದನ್ನು ಆರಂಭಿಸಿದ್ದಾಳೆ. ಹುಡುಗಿಯರಿಗಾಗಿ ಶಾಲೆಯೊಂದನ್ನು ನಡೆಸುತ್ತಿದ್ದಾಳೆ. ಆ ಶಾಲೆಯಲ್ಲಿ ಅಡಿಗೆ ಕಲಿಸುವ ಒಂದು ವಿಭಾಗವನ್ನು ತೆರೆದಿದ್ದಾಳೆ. ಇಷ್ಟೇ ಅಲ್ಲದೆ ಮಹಿಳಾ ಕಲ್ಯಾಣ ಯೋಜನೆಯ ಕೇಂದ್ರ ಮತ್ತು ಬಾಲವಿಕಾಸ ಯೋಜನೆಯಡಿಯಲ್ಲಿ ಬಾಲವಾಡಿಯನ್ನೂ ನಡೆಸುತ್ತಿದ್ದಾಳೆ.''

''ವಾಹ್ ಅತ್ತಿಗೆ'' ಎಂದುಕೊಂಡೆ ನಾನು. ಸಂತೋಷದಿಂದ ಮನಸ್ಸು ತುಂಬಿ ಹೋಯಿತು.

***

ನಾನು, ಪಾರ್ವತಿ ಅತ್ತಿಗೆಯ ಮನೆ ಬಾಗಿಲು ತಲುಪುತ್ತಿದ್ದಂತೆ, ಒರಟು ಖಾದಿ ಸೀರೆ ಉಟ್ಟು ಹಣೆಯ ಮೇಲೆ ಅಗಲದ ಕುಂಕುಮವಿಟ್ಟಿದ್ದ ಪಾರ್ವತಿ ಅತ್ತಿ

ಉತ್ಸಾಹದಿಂದ ಹೊರಗೆ ಬಂದಳು. ನನ್ನ ಬೆನ್ನ ಮೇಲೆ ಕೈ ಇಟ್ಟು ನಿರ್ಮಲ ಸ್ನೇಹದಿಂದ "ಅಂತೂ ನನ್ನ ಕರೆಯನ್ನು ಕೇಳಿಬಂದೆಯಲ್ಲಾ. ನಿಜಕ್ಕೂ ಇದು ನಮ್ಮ ಭಾಗ್ಯ" ಎಂದಳು. ಹಿಂದೆಯೇ ಬಂದ ಶಂಕರಣ್ಣ ಪ್ರೀತಿಯಿಂದ ಅಪ್ಪಿಕೊಂಡು, ಕೈ ಹಿಡಿದು ಒಳಗೆ ಕರೆದೊಯ್ದನು.

ನಾನು ಶಂಕರಣ್ಣನನ್ನು "ಅಣ್ಣ ಈಗಲೂ ಮಿಲ್‌ನಲ್ಲೇ ಕೆಲಸ ಮಾಡುತ್ತಿದ್ದಿಯೇನು?" ಎಂದೆ.

"ಹೌದು. ಆದರೆ ಕಾರ್ಮಿಕರ ಯೂನಿಯನ್ ಕೆಲಸದಿಂದ ಮಿಲ್ ಹೊರಗೇ ಇರುವ ಹಾಗೆ ಆಗಿದೆ. ನಿಮ್ಮ ಅತ್ತಿಗೆ ಈಗ ಒಬ್ಬ ನಾಯಕಿಯಾಗಿದ್ದಾಳೆ. ಅಷ್ಟು ಸಾಲದು ಎಂದು ನನ್ನನ್ನೂ ಹೊಡೆದು ಬಡಿದು ನಾಯಕನನ್ನಾಗಿ ಮಾಡಿದ್ದಾಳೆ" ಎಂದು ಹೇಳಿದ ಶಂಕರಣ್ಣ.

"ನನಗೆ ಗಣೇಶ ಅತ್ತಿಗೆಯ ಸಾಧನೆಗಳ ಬಗ್ಗೆ ಎಲ್ಲಾ ಹೇಳಿದ್ದಾನೆ. ಆಶ್ಚರ್ಯವಾಗುತ್ತಿದೆ. ಇಷ್ಟೆಲ್ಲಾ ಕೆಲಸಗಳನ್ನು ನೀವು ಹೇಗೆ ಮಾಡುತ್ತಿದ್ದೀರಿ? ಇದರ ಗುಟ್ಟೇನು ಅತ್ತಿಗೆ? ನನಗೆ ಅದರ ಬಗ್ಗೆ ಸ್ವಲ್ಪ ಹೇಳಿ."

"ಏನೂ ಇಲ್ಲ ತಮ್ಮ. ಇನ್ನೊಬ್ಬರಿಂದ ಕೆಲಸ ಮಾಡಿಸಬೇಕೆಂದು ಅಂದುಕೊಳ್ಳುವ ಬದಲಾಗಿ ನಾವೇ ಮಾಡಲು ಪ್ರಾರಂಭಿಸಿದರೆ ಏನೂ ಕಷ್ಟವಾಗುವುದಿಲ್ಲ. ಹಳ್ಳಿಯಿಂದ ಬಂದ ಮೇಲೆ ಕಾಲೋನಿಯಲ್ಲಿ ಮನೆ ಸಿಕ್ಕಿತು. ನಾನು ಕಾಲೋನಿಯಲ್ಲಿದ್ದ ಶ್ರಮಹಿತಕಾರಿ ಕೇಂದ್ರಕ್ಕೆ ದಿನವೂ ಹೋಗುತ್ತಿದ್ದೆ. ಒಂದು ದಿನ ಕೇಂದ್ರದಲ್ಲಿ ಮರುದಿನ ಕಮಲಾವತಿ ದೇವಿ ಎನ್ನುವವರು ಬರುತ್ತಾರೆ ಎಂದು ಹೇಳಿದರು. ಆಕೆ ಮಹಿಳೆಯರಿಗೆ ತಮ್ಮ ಮನೆ ಮತ್ತು ಜೀವನವನ್ನು ಹೇಗೆ ನಡೆಸುವುದು ಎಂಬುದರ ಬಗ್ಗೆ ಮಾತನಾಡುತ್ತಾರೆ ಎಂದು ತಿಳಿಯಿತು. ನಿನಗೆ ನೆನಪಿರಬೇಕು. ಹಳ್ಳಿಯಲ್ಲಿ ನಾನು ಮಾತುಮಾತಿಗೂ ಕಮಲಕ್ಕನನ್ನು ನೆನಪಿಸಿಕೊಳ್ಳುತ್ತಿದ್ದೆನಲ್ಲಾ"

"ಹಾ. ಹೌದು ಅತ್ತಿಗೆ..." ನಾನು ಮಧ್ಯೆಬಾಯಿ ಹಾಕಿದೆ. "ಕೊನೆಗೂ ಕಮಲಕ್ಕ ಯಾರೆಂದು ಹೇಳಲಿಲ್ಲವಲ್ಲಾ?"

"ಈಗ ಹೇಳುತ್ತೇನೆ ಕೇಳು. ಆ ಕಮಲಾವತಿದೇವಿಯೇ, ನನ್ನ ಕಮಲಕ್ಕ. ಎಂದರೆ ನೀನು ನಂಬುತ್ತೀಯಾ? ಕೇಂದ್ರದಲ್ಲಿ ಆದಿನ ನನ್ನನ್ನು ನೋಡಿ "ಪಾರೂ ನೀನು ಇಲ್ಲಿ.." ಎಂದು ಅಪ್ಪಿಕೊಂಡಳು. ಅಂದಿನಿಂದ ಇಂದಿನವರೆಗೂ ನನ್ನ ಎಲ್ಲಾ ಕೆಲಸಗಳಿಗೂ ಅವಳೇ ಆಸರೆ. ಇದೆಲ್ಲಾ ಆಕೆಯ ಬೆಂಬಲದ ಫಲ. ಒಬ್ಬ ಗಂಡಸು ವಿದ್ಯೆ ಕಲಿತರೆ ಅವನು ಮಾತ್ರ ವಿದ್ಯಾವಂತನಾದ ಹಾಗೆ. ಆದರೆ "ಒಬ್ಬ ಹೆಣ್ಣು ಕಲಿತರೆ ಅವಳ ಸಂಸಾರ, ಪರಿಸರ ಎಲ್ಲವೂ ಶಿಕ್ಷಣ ಪಡೆದಂತೆ ಆಗುತ್ತದೆ" ಎನ್ನುತ್ತಾಳೆ ಕಮಲಕ್ಕ. ಕಮಲಕ್ಕ ಈಗ ಪರಿವಾರ ಕಲ್ಯಾಣ ವಿದ್ಯಾಪೀಠ ನಡೆಸುತ್ತಿದ್ದಾಳೆ" ಎಂದಳು ಅತ್ತಿಗೆ.

ಆ ರಾತ್ರಿ ಹತ್ತು ಗಂಟೆಯವರೆಗೂ ಅತ್ತಿಗೆಯ ಸುಖೀ ಸಂಸಾರದೊಂದಿಗೆ ಮಾತನಾಡುತ್ತಾ ಕಳೆದೆ. ಅಣ್ಣ, ಅತ್ತಿಗೆ, ಅವಳ ಮೂರು ಮಕ್ಕಳು. ಈ ಐದು ಜೀವಗಳ ಪರಿವಾರ, ಒಂದು ಅರಳಿ ನಿಂತ ಹೂಗೊಂಚಲಿನಂತೆ ಅನಿಸಿತು ನನಗೆ. ಈ ಹೂಗೊಂಚಲನ್ನು ಅತ್ತಿಗೆಯೇ ಜೋಡಿಸಿ, ಕೂಡಿಸಿ, ನಳನಳಿಸುವಂತೆ ಇಟ್ಟಿದ್ದಳು. ಎರಡು ಗಂಡುಮಕ್ಕಳು ಗಣೇಶ, ರಮೇಶ, ಒಂದು ಹೆಣ್ಣು ಮಗು ಸಂಧ್ಯಾ. ಎಲ್ಲರೂ ಓದಿನಲ್ಲಿ ಜಾಣರು, ನಡೆನುಡಿಯಲ್ಲಿ ಸಭ್ಯರು. ನೋಡಲು ಆರೋಗ್ಯವಂತರು, ಸುಂದರರು.

ಅತ್ತಿಗೆಯ ಮನೆಯಲ್ಲಿ ಮರೆಯಲಾರದ ಪ್ರೀತಿ ಉಪಚಾರಗಳನ್ನೂ ಪಡೆದು ಮಾರನೆಯ ದಿನ ಲಖನೌಗೆ ಹೊರಟೆ. ಈಗಲೂ ಕಷ್ಟಗಳು ಬಂದಾಗ ನರಳಿ, ಮುರಿದು ಬೀಳುವ ಸಂಸಾರಗಳನ್ನು ನೋಡಿದಾಗಲೆಲ್ಲಾ ನನಗೆ ನನ್ನ ಹಳ್ಳಿಯ ಪಾರ್ವತಿ ನೆನಪಿಗೆ ಬರುತ್ತಾಳೆ. ಹಾಗೆಯೇ ನಗುವ-ನಲಿಯುವ, ತುಂಬಿದ ಪುಟ್ಟ ಸಂಸಾರಗಳನ್ನು ನೋಡಿದಾಗ ಕಾನ್ಪುರದ ಪಾರ್ವತಿ ನೆನಪಿಗೆ ಬರುತ್ತಾಳೆ. ಅದೇ ನಗುಮುಖ, ಅದೇ ಶ್ರದ್ಧೆ, ಅದೇ ನಿಶ್ಚಯ ಹೊಂದಿರುವ ಅತ್ತಿಗೆ ಸದಾ ಹೆಚ್ಚಿನದನ್ನು ಸಾಧಿಸುವುದರಲ್ಲೇ ತೊಡಗಿರುತ್ತಾಳೆ. ಒಂದು ಸಂಸಾರಕ್ಕೆ ಅಲ್ಲ, ಇಡೀ ದೇಶಕ್ಕೆ ಆದರ್ಶವಾಗಿದ್ದಾಳೆ, ಈ ನನ್ನ ಪಾರ್ವತಿ ಅತ್ತಿಗೆ.

* * *

ಕನ್ನಡ ವಿಶ್ವವಿದ ... ಟ್ಟಿದವರೆಗೆ ಉತ್ತಮ
ಹಾಗೂ ಉಪ ... ಪಠ್ಯಪುಸ್ತಕ ರಚನಾ
ವಿಭಾಗ'ವನ್ನು ... ಪಠ್ಯಪುಸ್ತಕ ರಚನೆ
ಮಾಡಬೇಕೆಂದು ... ನವಸಾಕ್ಷರರಿಗಾಗಿ
ಪುಸ್ತಕ ಬರೆಸು ... ಕ್ಕೆ ವಹಿಸಿಕೊಟ್ಟರು.
ವಿಶ್ವವಿದ್ಯಾಲಯ ... ಖ್ಯಾತ ಲೇಖಕರನ್ನು,
ಭಾಷಾತಜ್ಞರನ್ನು ... ರೆಲ್ಲರ ಅಭಿಪ್ರಾಯ,
ಸಲಹೆ, ಸಹಕಾರ ... ಮುದ್ರಣ ವಿನ್ಯಾಸ,
ಚಿತ್ರಗಳ ಮಹ ... ನೇಕ ಸಲ ಚರ್ಚಿಸಿ
ಯೋಜನೆಯನ್ನು

ನವಸಾಕ್ಷರರಿಗಾಗಿ ... ಪ್ರಕಟವಾಗಿರುವ
ಪುಸ್ತಕಗಳನ್ನೆಲ್ಲ ... ಭಾಷಾತಜ್ಞರಿಂದ
ಪರಿಶೀಲಿಸಲಾಯಿ ... ಸಿಕೊಂಡು ಅವರಿಗೆ
ಕಮ್ಮಟಗಳನ್ನು ... ತ ಆಯ್ದ ಜಿಲ್ಲೆ,
ತಾಲೂಕುಗಳಿಗೆ ... ಸುವವರಿಂದ ಅದರ
ಗುಣದೋಷಗಳ ... ವಿಶ್ವವಿದ್ಯಾಲಯದ
ಗಣಕಯಂತ್ರದಲ್ಲಿ ವಿಶ್ಲೇಷಿಸಲಾಯಿತು; ಮತ್ತೆ ಮತ್ತೆ ಕ್ಷೇತ್ರಗಳಿಗೆ ಹೋಗಿ, ಕ್ಷೇತ್ರ ಸಹಾಯಕರು ನೀಡಿದ್ದ ಮಾಹಿತಿಗಳನ್ನೆಲ್ಲ ಮರು ಪರಿಶೀಲನೆ ಮಾಡಿ, ನಂತರ ನವಸಾಕ್ಷರರ ಅಪೇಕ್ಷೆಗೆ ಅನುಗುಣವಾಗಿ ವಿಷಯದ ಆದ್ಯತೆಗಳನ್ನು ನಿರ್ಧರಿಸಿಕೊಂಡು ಪುಸ್ತಕ ರಚನೆಗೆ ತೊಡಗಲಾಯಿತು; ಪ್ರಖ್ಯಾತ ಲೇಖಕರು ನಮ್ಮ ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಜೊತೆ ಚರ್ಚಿಸಿ ತಮ್ಮ ಹಸ್ತಪ್ರತಿಗಳಿಗೆ ಅಂತಿಮ ರೂಪ ಕೊಟ್ಟರು. ಕಲಾವಿದರು ವಿಷಯಗಳಿಗೊಪ್ಪುವ ಚಿತ್ರಗಳನ್ನು ಬರೆದುಕೊಟ್ಟರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳನ್ನು ನವಸಾಕ್ಷರರ ಬಳಿ ಕೊಂಡೊಯ್ದು ಅವರ ಮುಂದೆ ಪಠಿಸಿ ನಂತರ ಅವರ ಅಭಿಪ್ರಾಯ, ಪ್ರತಿಕ್ರಿಯೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ಅಂತಿಮಗೊಳಿಸಲಾಯಿತು.

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು